# ಮೊದಲನೆ ಆವೃತ್ತಿಯ ಮುನ್ನುಡಿಯಿಂದ

ಈ ಸಂಗ್ರಹದಲ್ಲಿ ಒಂದೆರಡನ್ನು ಬಿಟ್ಟು ಮಿಕ್ಕುವೆಲ್ಲವನ್ನೂ ಭಾವೋಚಿತ ರಾಗದೊಂದಿಗೆ ಹಾಡಿಕೊಳಬಹುದು. ಅಲ್ಲಲ್ಲಿ ಕವನಗಳ ತಲೆಯ ಮೇಲೆ, ನನಗೆ ಉಚಿತವೆಂದು ತೋರಿದ ರಾಗಗಳ ಹೆಸರುಗಳನ್ನು ಸೂಚಿಸಿದ್ದೇನೆ. ಅವುಗಳನ್ನು ಬಿಟ್ಟು ಇನ್ನಾವ ರಾಗಗಳನ್ನು ಉಪಯೋಗಿಸಿಕೊಂಡರೂ ಆಗುವುದು. ಎರಡು ಮೂರು ಕಡೆಗೆ 'ಗಝುಲ್' ಎಂದು ಬರೆದಿರುವೆನಲ್ಲವೆ! ಅವು ಗಝುಲಿನ ಧಾಟಿಗಳನ್ನು ಅನುಸರಿಸಿ ಬರೆದ ಅಚ್ಚಗನ್ನಡದ ಹೊಸ ವೃತ್ತಗಳು.

'**ವಿರಹಿಣಿ**'ಯ ಕವನಗಳೆಲ್ಲ ಯಾವ ಜಾತಿಗೆ ಸೇರಿದುವೆಂಬುದರ ವಿಚಾರವನ್ನು ನಾನೇನೂ ಹೇಳಬೇಕಾಗಿಲ್ಲ. ರಸಿಕ ವಿಮರ್ಶಕರು ಆ ಕೆಲಸವನ್ನು ಮಾಡಿಯೆ ಮಾಡುವರು. '**ಶಬರಿಯ ಬಾಳು**' ಸ್ವತಂತ್ರ ಖಂಡಕಾವ್ಯವಾದರೂ ಈ ಸಂಗ್ರಹದಲ್ಲಿಯೆ ಸೇರಲು ತಕ್ಕುದೆಂದು ಕೊನೆಗೆ ಕೊಟ್ಟಿರುವೆನು.

ಸಾಧನಕೇರಿ
೩೦-೧-೩೫

**ಆನಂದಕಂದ**

# ದ್ವಿತೀಯ ಮುದ್ರಣದ ಪ್ರಕಾಶಕನ ಮಾತು

'ವಿರಹಿಣಿ' ಮೊದಲು ಮೈದೋರಿ ಇಪ್ಪತ್ತು ವರ್ಷಗಳ ಮೇಲಾಗಿ, ಅದರ ಪ್ರತಿಗಳು ತೀರಿಯೇ ಬಹುದಿನಗಳಾದವು. ರಸಿಕರ ಬೇಡಿಕೆ ಇರುತ್ತಿದ್ದರೂ ಅದನ್ನು ಈಡೇರಿಸುವದಕ್ಕೆ ಕಾಲಕೂಡಿಬರಬೇಕಲ್ಲ! ಇದೀಗ 'ವಿರಹಿಣಿ' ಮರು-ಮೈದಳೆದು ಹಾಡುತ್ತ ಬರುತ್ತಿದ್ದಾಳೆ. ರಸಿಕರ ಮನ ತಣಿಸುವ ಈ ಕಾರ್ಯವನ್ನು ನಮಗೊಪ್ಪಿಸಿದ್ದುದಕ್ಕಾಗಿ 'ಆನಂದಕಂದ'ರಿಗೆ ನಾವು ಋಣಿ.

೧೫-೯-೫೬

# ಪರಿವಿಡಿ

# ಹೂಮಾಲೆ

ಕೇದಾರಗೌಳ

ಯಾರಿಗರುಪಿಸಲಿದನು ಮಾಲೆಯ-
ನಾರ ಕೊರಳೊಳಗಿರಿಸಲಿ ?
ಯಾರಿಗೊಪ್ಪಿಸಿ ಕಣ್ಣೆದೆಯ ಬಾ-
ಯಾರಿಕೆಯನಂತರಿಸಲಿ ?

೧

ಮನಸು ಮೆಚ್ಚಿದ ಮಲರುಗಳನೇ
ಎನಿತೆನಿತೊ ನಾನಾಯ್ದೆ.
ಮನವನಿದರೊಳೆ ನಿಲಿಸಿ ಬಲು ಚೆಲು-
ವೆನಿಪ ದಂಡೆಯ ಕೋದೆ.
ಇನಿತು ವೇಳೆಯ ಬಣಗುಗಳೆಯುತ
ಹೆಣೆದೆನಲ್ಲವೆ ಹೂವ ಬರಿದೆ ?
ಯಾರಿಗರುಪಿಸಲಿದನು ಮಾಲೆಯ-
ನಾರಕೊರಳೊಳಗಿರಿಸಲಿ ?

೨

ನನ್ನ ಮುಡಿಯೊಳೆ ಮುಡಿದರೀ ಸರ-
ವನ್ನು ಚೆನ್ನೆನಿಸೀತೇ ?
ಮುನ್ನ ನಾ ಬಗೆದಿರುವ ಸೊಗಸನು
ನನ್ನೆದೆಯು ಸವಿದೀತೇ ?

ಕುನ್ನಿತನ ಸರಿ ನನ್ನದಿದು ! ಆ
ಚೆನ್ನತೆಯನೆಂತಿನ್ನು ಕಾಣುವೆ ?
ಯಾರಿಗರುಪಿಸಲಿದನು ಮಾಲೆಯ-
ನಾರ ಕೊರಳೊಳಗಿರಿಸಲಿ ?

೩

ಅರಳ ದಂಡೆಯೆ ನಿನ್ನ ಚೆಲುವಿನ
ಸಿರಿಗೆ ಸರಿಯಿಹುದೇನೆ ?
ಮರುಳು ನಿನ್ನೀ ಚೆಲುವ ಬಳಸುವ
ಸರಿದೆರನ ನೀ ಕಾಣೆ
ಅರಿಯೆನಾ ಪರಿಯನ್ನು ನಾನೂ
ಕುರುಡ-ಕುರುಡರ ಕೆಳೆಯಿದೇನೆ ?
ಯಾರಿಗರುಪಿಸಲಿದನು ಮಾಲೆಯ-
ನಾರ ಕೊರಳೊಳಗಿರಿಸಲಿ ?

೪

ಜನಿಸಿ ಬಂದುದಕರಳುಗಳೆ ನೀ-
ವಿನಿತನೂ ಫಲ ಕಾಣದೆ
ಒಣಗಿಹೋಗುವ ವೇಳೆ ಬಂದಿತೆ—
ನನ್ನ ಸಂಗತಿಯಿಂದೆ ?
ಕೆಣಕು ದೈವದ ನನ್ನ ತೆರದೊಳೆ
ಬಣಗುಬಾಳಾಯ್ತೇನು ನಿಮಗೆ ?
ಯಾರಿಗರುಪಿಸಲಿದನು ಮಾಲೆಯ-
ನಾರ ಕೊರಳೊಳಗಿರಿಸಲಿ ?

# ಅತೃಪ್ತಿ

ಯುವನ್

ಎಲ್ಲಿದೆಲ್ಲಿದೆ ತಣಿವು ? ಏತರಲ್ಲಿದೆ ತಣಿವು ?
ಎಲ್ಲಿಯೆಲ್ಲಿಯು ಕಾಣಲೊಲ್ಲದಾ ತಣಿವು !

ಕುಸುರುಕುಸುರಿನ ಚಿನ್ನ-ರನ್ನದೊಡವೆಗಳಿಟ್ಟು
ಹೊಸ ಮಿರುಗಿನಾ ಸೀರೆ ಬಣ್ಣಗುಪ್ಪಸ ತೊಟ್ಟು
ಸಾಕುಸಾಕಿನ್ನೆಂಬ ತಣಿವ ಪಡೆಯುವರು,
ಆ ಕೆಳದಿಯರು ನಕ್ಕು ನಲಿದಾಡುತಿಹರು.

ಇದು ಏನು ? ನನ್ನದೀ ಎಡೆಯಾಟವಚ್ಚರಿಯು !
ಒಡವೆಯುಡುಗೆಯನೊಲಿದು ಪಡೆಯುವೆನು, ಆದರೆಯು
ಒಡವೆ ಬಗೆದುಗುಡವನು ದೂಡಲಿಲ್ಲ !
ಉಡುಗೆ ತಣಿವನು ನಸುವು ನೀಡಲಿಲ್ಲ !

ಸರಿವರಯದವರೆಲ್ಲ ತೆರತೆರದ–ಹುರುಳಿರುವ–
ಅರಳುಗಳ ಮುಡಿಮುಡಿದು ಹರುಷದಲಿ ಹಿಗ್ಗುವರು.
ಹಾರಯಿಸಿ ಹಾರಯಿಸಿ ಹೂಮುಡಿಯೆ ನಾನು,
ತೀರಲಿಲ್ಲವತೃಪ್ತಿ, ಹೇರಿತದು ಇನ್ನೂ !

ಕೊಳಲೂದಿ ವೀಣೆ ತಂಬೂರಿಗಳ ಬಾಜಿಸುತ
ಗೆಳತಿಯರು ಸುಲಭದಲಿ ಗಳಿಸುವರು ತೃಪ್ತಿಯನು ;
ಕೊಳಲುಲಿಯು ಬಗೆದುಗುಡ ದೂಡಲಿಲ್ಲ !
ವೀಣೆ ತಣಿವನು ನಸುವು ನೀಡಲಿಲ್ಲ !

ಅನುಕೂಲದೈವರಾ ವನಿತೆಯರು, ನಾ ದೈವ-
ದನುನಯುವ ಕಳೆದುಕೊಂಡವಳು; ದಿಟವೇ ದೇವ?
ಅಲ್ಲವಿಂತಿದು! ಅವರದದೆ ಸುಖದ ಕೊನೆಯು;
ಎಲ್ಲಿದೆಯೊ ದೂರ ನನ್ನಾ ಸುಖದ ಮನೆಯು..!

ಆ ಸುಖದ ಮನೆಯನೊಂದಿಸುವ ಒಡವೆಯ ಬಯಸಿ
ಆಶೆ–ಸೊನ್ನರತಿ ಬಗೆಯೊಳಗೆ ಬೆಂಕೆಯನಿರಿಸಿ
ಊದಿ ಉರಿಮಾಡಿ ಏನನೊ ಕಾಸುತಿಹಳು,
ಏತರಿಂದಲೊ ಯಾವುದನೊ ಹಣಿಯುತಿಹಳು.

*** *** *** ***

ಮನವ ಮನೆಮಾಡಿರುವ ದುಗುಡವನು ತೆಗೆದು
ತಣಿವನೀವಾ ಒಡವೆ ದೊರೆವುದೆನಗೆಂದು?

# ಅಗಲಿಕೆ

ಸಾರಂಗ

ಅಗಲಿಕೆಯೆ, ನಿನ್ನಗಲನಳೆಯುವವರಾರು ?
ಬಗೆಯೊಲವೆ ನಿನ್ನ ನೆಲೆ ತಿಳಿಯುವವರಾರು ?

ಹಿಂದೆ ಗೋವಳಿತಿಯರು ನಂದಕಂದನನಗಲಿ
ದಂದುಗದಿ ಮೈಮನದ ಹೊಂದಿಕೆಯ ಮರೆಯುತಲಿ
ನೊಂದು ಸಿಡುಸರದಿ ಮನಬಂದಂತೆ ಕೂಗುತಲಿ
ಬೆಂದು ಬಾಯ್ಬಿಡುತ ಅಲೆದಾಡಿದರು ಅಡವಿಯಲಿ
"ಹುಲ್ಲೆಯೇ ನಲ್ಲನೆಲ್ಲಿರುವ ನೀನರುಹು !
"ಕೋಗಿಲೆಯೆ ಕೂಗಿ ನುಡಿ ಅವನಿರುವ ಕುರುಹು !
"ಗಿಳಿಹಿಂಡೆ ಕಂಡಿಹೆಯ ಗೆಳೆಯನನು ? ಹೇಳು !
"ಅಳಿಕುಳವೆ ಅಡಗಿರುವನೆಲ್ಲಿ ನಮ್ಮಾಳು ?

"ಅಣ್ಣ ! ಗರಿಗಣ್ಣ ! ಮನವನ್ನನಿರುಹನು ತಿಳುಹು !
"ಹೆಣ್ಣುಗಳ ಹೋಗಲಿಹ ಹರಣಗಳ ನೀನುಳುಹು !
"ಹಕ್ಕಿಗಳೆ, ನುಡಿಹೇಳಿ ಚಿಕ್ಕ ಚೆನ್ನಿಗನೆಲ್ಲಿ ?
"ದಿಕ್ಕ ತೋರಿರಿ, ಸಾಕು, ಹೊಕ್ಕು ಹುಡುಕುವೆವಲ್ಲಿ !
"ಜಂಗುಳಿಯ ಹಸುಗಳೇ ರಂಗನೆಲ್ಲಿಹನು ?
"ಕಂಗಳಿಗೆ ಕಾಣದೊಲು ಮೈಯ ಮರೆಸಿಹನು ;
"ಮಂಗಣ್ಣಗಳಿರ, ಮಿತ್ರನ ಮರೆಯ ಹೇಳಿ !
"ಹೆಂಗಳೇ ಹರಕೆಯನು ಹೊಂದಿ ಸೊಗಬಾಳಿ !

"ಮರಬಳ್ಳಿಗಳೆ ಅರುಹಿ ಹರಿಯಿಸುವ ತಾಣವನು!
"ಕೆರೆತೊರೆಗಳೇ ತೋರಿ ಅರಸನಿಪ ಗುರುತನ್ನು!
"ಹೊಳೆಯಮ್ಮ, ತಿಳುಹಿಸೌ ಕೊಳಲಿಗನ ನೆಲೆಯನ್ನು!
"ಬೆಟ್ಟದೊರೆ, ಮೂಗುತನ ಬಿಟ್ಟು ತೋರಾತನನು!
"ಮುಗಿಲೆ, ನಿನ್ನಂತಿರುವ ಸೊಗಸೊಡಲನೆಲ್ಲಿ?
"ಹಗಲೊಡೆಯ, ನಮ್ಮ ಬಗೆಗಳ್ಳನಿಹನೆಲ್ಲಿ?
"ಸುಳಿವೆಲರೆ, ನಮ್ಮೊಲವ ಸುಲಿದಾತನೆಲ್ಲಿ?
"ಬನಸಿರಿಯೆ, ನಮ್ಮ ಮನ ತಣಿಸುವವನೆಲ್ಲಿ?"

ಇಂತು ಹೆಣ್ಣುಗಳು ಕಣ್ಣಿಗೆ ಕಂಡುದೆಲ್ಲವನು–
ನಸುವು ತಿಳಿವಿರದಿರುವ ಹಸು ಹಕ್ಕಿ ಮಿಗಗಳನು–
ಉಸಿರಿಲ್ಲದಿಹ ಬಳ್ಳಿ–ಹಸಿರು–ಗಿಡ–ಮರಗಳನು–
ನುಡಿಸುತಳುತಲಿದ ಕತೆಯನ್ನಂದು ಕೇಳಿದೆನು.
'ಹುಚ್ಚು ಹೆಣ್ಣುಗಳವರು!' ಎಂದು ಬಗೆದಂದೆ
'ಹೆಚ್ಚು ಇದು! ಎಲ್ಲ ಕವಿಕಲ್ಪನೆಯು!' ಎಂದೆ;
'ಕೆಲಸವಿಲ್ಲದ ಕವಿಗೆ ಹುಸಿಯು ಹೆಣೆಯುವುದೇ
'ಬಲು ಕೆಲಸ!' ಎಂದು ಬೀಳ್ಗಳೆದು ನಾ ನುಡಿದೆ.

ಅಂದೆನಗೆ ತಿಳಿಯದೆಯೆ ಬಾಯ್ಗೆ ಬಂದುದನೊರೆದೆ;
ಇಂದು ಆ ಕತೆಯೆಲ್ಲ ಸರಿಯೆಂದು ತೋರುತಿದೆ.
ಸಟೆಯಲ್ಲ ಕವಿಯುಸಿರು, ಹುಚ್ಚಲ್ಲ ಹುಡುಗಿಯರು,
ದಿಟವನನುಭವಿಸದೆಯೆ ಅರಿತವರದಾರಿಹರು?
'ಮುಳುಗದೆಯೆ ನೀರ ನೆಲೆಯೊಳಗನರಿಯಲಿಕೆ–
'ಬೆಳಕಳಿದ ಕಣ್ಣೆ ತಿಂಗಳನು ತಿಳಿಯಲಿಕೆ–
'ಎಂತಾಗುವುದು?' ಎಂಬ ಕಂಡುಂಡ ಮಾತು
ಇಂತೆನಗೆ ತಿಳಿದು ಮನದಾ ಮುಸುಕು ಹೋಯ್ತು.

ದೂರವಿಹ ನನ್ನಿನಿಯನೂರ ದಿಕ್ಕಿನ ಮುಗಿಲು
ಏರಿ ನನ್ನಯ ಬಳಿಯ ಸಾರಿ ಬರೆ ಬಾನಿನೊಳು,
ನನ್ನವುಗಳೆಂದು ನೇಹದ ನೆಟ್ಟ ನೋಟದಲಿ
ಮುಗಿಲ ನೋಡುತ ನಿಲುವೆ ಹಲವು ಹಾರಯಿಸುತಲಿ ;
ದೊರೆಯಿರುವ ದೆಸೆಯಿಂದ ಹಕ್ಕಿಗಳು ಹಾರಿ
ಬರುತಿರಲು, ಹರುಷದೊಳು ನವಿರುಗಳು ನಿಮಿರಿ
ನನ್ನ ನಂಟುಗಳೆಂದು ನೆನೆವೆನವುಗಳನು,
ನನ್ನಾತನೊಸಗೆಯನು ಕೇಳಲೆಳಸುವೆನು.

ಮೆಲುಗಾಳಿಯೇ ಇರಲಿ, ಬಲುಗಾಳಿಯೇ ಇರಲಿ,
ಗೆಳೆಯನಿಹ ಕಡೆಯಿಂದ ಸುಳಿದು ಬರೆ–ಮೋಹದಲಿ
ತಿಳಿಯುವೆನು ನಾ ತೀರ ಬಳಿಯನಾಪ್ತನೆಂದದನು–
ತಿಳುಹಿಸಲು ನನ್ನೆದೆಯ ಒಳಮಾತನೆಲ್ಲವನು
ನಾಲಗೆಯು ನಲಿಯುವುದು, ಮನವು ಕುಣಿಯುವುದು,
ಕೇಳಲಾತನ ಕತೆಯ ಕಿವಿಯು ಕೋರುವುದು,
ಹೀಗೆನ್ನನಾಡಿಸುವುದಾವುದದು ಹುಚ್ಚೋ . . ?
ಆಗದಿರಲಿನಿಯನಲ್ಲಿರುವೆದೆಯ ನಚ್ಚೋ . . ?

ಇನಿಯನನು ಪೋಡಿ ನುಡಿಸಿದ ಮಂದಿಯೆಲ್ಲರನು
ಮನೆಯವರೆ ಎಂದು ನಾ ಮನ್ನಿಸುವೆನವರನ್ನು
ಮನದನ್ನನಾ ರೂಪುಗುಣದ ಬಣ್ಣನೆಯನ್ನು
ನನಗೊರೆಯೆ ನನ್ನ ನಾನೇ ಮರೆತು ಕೇಳುವೆನು.
ಎನಿತೊ ಜನರಿಲ್ಲವೇ ಮತ್ತೆ ನೆರೆಗಳೊಳು ?
ಎನಿಸುವರು ನನಗವರು ಬರಡುಬೊಂಬೆಯೊಲು ;
ಮಾತಿಲ್ಲದುವನೆಲ್ಲ ಮಾತನಾಡಿಸುವೆ,
ಮಾತನಾಡುವರಲ್ಲಿ ಮೂಗುವಡೆದಿರುವೆ.

ಜಡವಸ್ತುಗಳನು ಜೀವಿಗಳಂತೆ ಕಾಣಿಸುವ
ನಡೆನುಡಿವ ಜೀವಿಗಳ ಜಡಗಳಂತಾಗಿಸುವ
ಅಗಲಿಕೆಯೆ, ನಿನ್ನಗಲನಳೆಯುವವರಾರಿಹರು ?
ಬಗೆಯೊಲವೆ ನಿನ್ನ ನೆಲೆ ತಿಳಿದವರದಾರು ?

# ಉಪ್ಪರಿಗೆ

ಗಝುಲ್

೧

ಅವನಿಗಾಗಿಯೆ ಬವಣಿಯೊಂದುತ
  ಎದೆಯ ಕುದಿಯೊಳು ಕಾಯುತ,
ಸವಿಯ ಕಾಣದೆ ಬಾಳಿನಲಿ ಬಿಸು-
  ಸುಯಿಲ ಬೇಗೆಗೆ ಬೇಯುತ
ಸವೆಯುತಿಹೆ ನಾನಿಲ್ಲಿ . . . . !
ಸವೆಯುತಿಹೆ ನಾನಿಲ್ಲಿ—ಕತ್ತಲು
  ಕವಿದ ಕಿರುಮನೆಯಲ್ಲಿ.

೨

ಇಲ್ಲಿ ಕತ್ತಲು ಕವಿದ ಕಿರುಮನೆ-
  ಯಲ್ಲಿ ಸುಮ್ಮನೆ ಕುಳಿತರೆ,
ನಲ್ಲ ಬಂದೆನ್ನನ್ನು ತಾನೆ-
  ಲ್ಲೆಲ್ಲಿಯೂ ಶೋಧಿಸಿದರೆ . . . . !
ಹೊರಗೆ ಇರದಿರೆ ನಾನು . . . .
ಹೊರಗೆ ಇರದಿರೆ ನಾನು—ಹಾಗೆಯೆ—
    ಹೊರಟುಬಿಡಬಹುದೇನು ? !

೩

ನಾನು ಈ ತಾಣದೊಳು ಕುಳಿತುದು
  ಜಾಣನಿಗೆ ಗೊತ್ತಾಗಿ,
ಕೋಣೆಯಲ್ಲಿಯೆ ಬಂದರೀ ಕರಿ-
  ಗತ್ತಲೆಯು ಒತ್ತಾಗಿ,

ಅವನ ಸಿರಿಮೊಗವನ್ನು . . . .
ಅವನ ಸಿರಿಮೊಗವನ್ನು—ಮರೆಯಿಸಿ
ಸವಿಗೆಡಿಸದಿಹುದೇನು ?

೪

ಇಲ್ಲಿ ಬರಿ ಬಿದ್ದಿದ್ದರೇನದು !
ನಲ್ಲ ಬಂದರೆ ಕಾಂಬೆನೇ!
ಬೆಲ್ಲದಂತಹ ಮೊದಲ ನೋಟವ
ಹುಲ್ಲನಾಗಿಸಿಕೊಂಬೆನೆ !
ಅದಕೆ ನೆಲೆಮನೆಗೇರಿ . . . .
ಅದಕೆ ನೆಲೆಮನೆಗೇರಿ—ಹೋಗುವೆ—
ತಿಂಗಳಂಗಳ ಸಾರಿ.

೫

ಹಗಲು ಇರುಳೂ ನಗುವ ಬೆಳಕದು
ಜಗಜಗಿಸುತಿಹುದಲ್ಲಿ,
ಬಿಗಿದು ಕಂಗಳ ಮುಗಿಸುವಾ ಕ-
ತ್ತಲೆಗೆ ನೆಲೆಯಿಲ್ಲಲ್ಲಿ,
ಅಲ್ಲಿ ಬಂದರೆ ಚೆನ್ನ . . . .
ಅಲ್ಲಿ ಬಂದರೆ ಚೆನ್ನ—ಅವನೊಳೆ—
ನಿಲ್ಲಿಸುವೆನೀ ಕಣ್ಣ !
ನಿಲ್ಲಿಸುವೆನೀ ಕಣ್ಣ . . . .
ನಿಲ್ಲಿಸುವೆನೀ ಕಣ್ಣ—ನಾತಗೆ—
ಸಲ್ಲಿಸುವೆ ನನ್ನನ್ನ !

# ನಾಚಿಕೆ

ಜೀವನಪುರಿ

೧

ಪಾಪಿ ನಾ, ತಿಳಿಗೇಡಿ ಅಂದು ಅರಿಯದೆ ಹೋದೆ,
ನಾಚಿಕೆಗೆ ಮೈಮಾರಿ ಮನದಳಲಿಗೀಡಾದೆ.
ಕೈಯ ಹಿಡಿವಾಗಿನಿಯು, ಕುಲದೋಜ ನಗೆಯಲ್ಲಿ
ಮೈಯ ಹಿಡಿದಲುಗಿ ಹೇಳಿದರು "ನೋಡೇ ಇಲ್ಲಿ,
ಚೆನ್ನಾಗಿ ಕಂದೆರೆದು ನಿನ್ನವನ ಮೊಗನೋಡು!"
ಎನ್ನುತಿರೆ ನಾಚಿಕೆಯು ಕಣ್ಣ ಮಾಡಿತು ಕುರುಡು;

ತಗ್ಗಿಸಿದ ತಲೆಯ ಮೇಲೆತ್ತಗೊಡಲಿಲ್ಲ,
ಹಿಗ್ಗಿನೂಟವನೆದೆಗೆ ಉಣ್ಣಗೊಡಲಿಲ್ಲ!

೨

ನಲ್ಲನಂದಾಡಿದೊಂದೇ ಒಂದು ಮಾತಿನಾ–
ಮೆಲ್ಲುಲಿಯ ಸವಿಯೆನಿತು..! 'ಕನಸಿನೊಳಗಿದ್ದು ನಾ
ವೀಣೆಯಿಂಚರ ಕೇಳುತಿರುವೆನೇನೋ..!' ಎಂದೆ,
ಗೋಣೆತ್ತಿ ನೋಡಬೇಕೆನುತೊಮ್ಮೆ ಹವಣಿಸಿದೆ;
'ಗೋಣೆತ್ತಿ, ನಾನೀಗ ನೋಡಿದರೆ ನೆರೆದವರು
'ನಾಣಿಲಿಯು ಇವಳೆಂದು ನಗರೆ..!' ಎನ್ನುತ ಬಗೆದೆ.

ತಗ್ಗಿಸಿದ ತಲೆಯ ಮೇಲೆತ್ತಲೇ ಇಲ್ಲ,
ಹಿಗ್ಗಿನಾ ನೋಟವನು ನೋಡಲೇ ಇಲ್ಲ!

೩

ಖೋಡಿ, ನಾಚಿಕೆಯೆ, ಕಿಡುಗೇಡಿಯೆನಿತಿರುವೆ ನೀ ?
ಮಾಡಿದೆಯಲಾ ಬರಿದೆ ನನ್ನ ಬಾಳಿನ ಹಾನಿ !
ಅಂದು ನೀ ನಡುವೆ ಬರದಿದ್ದರಾತನನೊಂದೆ
ಒಂದು ಸಲ ನೋಡಿ ಕೃತಕೃತ್ಯಳಾಗುತಲಿದ್ದೆ ;
ನಿನ್ನ ಜೊತೆಯನು ನೀಡದಿದ್ದರೆನಗೊಬ್ಬಳಿಗೆ
ತನ್ನ ಸೃಷ್ಟಿಯೆ ಬಿದ್ದುಹೋಗುತಿತ್ತೇ ವಿಧಿಗೆ !

ತಗ್ಗಿಸಿದ ತಲೆಯ ನೀನೆತ್ತಗೊಡಲಿಲ್ಲ,
ಹಿಗ್ಗಿನಾ ನೋಟವನು ನೋಡಗೊಡಲಿಲ್ಲ !

* * * * *

ಏಸು ಜನ್ಮದ ಹಗೆಯೆ ನಾಚಿಕೆಯೆ ನೀನನಗೆ ?
ಮೀಸಲನ್ನವ ಕಸಿದು ಬಿಸುಡಿದೆ, ಇದೆಂಥ ನಗೆ ?

# ತೊಡಕು

ತೋಡಿ

ಚೆಲುವು ಹಿರಿಯದೋ !–ಹೃದಯ-
ದೊಲವು ಹಿರಿಯದೋ . . . . !
ಚೆಲುವಿನಲಿಯೆ ಒಲವು ಇಹುದೊ !
ಒಲವಿನಲಿಯೆ ಚೆಲುವು ಇಹುದೊ !
ಚೆಲುವು ಹಿರಿಯದೋ !–ಹೃದಯ-
ದೊಲವು ಹಿರಿಯದೋ . . . . !

೧

ಇನಿಯನಗಲ ನೆನಸಿ ನೆನಸಿ
ಮನೆಯಲಿರಲು ಬೇಸರೆನಿಸಿ
ದಣಿದ ಮನವ ತಣಿಸಲೆಣಿಸಿ
ಬನಕೆ ಹೋಗಲೆನುತ ನಡೆದೆ.
ತಳಿರಿನೊಳುಪ ಕಂಡು ಕುಣಿದೆ,
ಅಲರ ನಗೆಯ ನೋಡಿ ನಲಿದೆ,
ಚೆಲುವ ಬನದೊಳಲೆದೆ–ಉಲಿದೆ,
ಅಳಲ ಕೆಲವು ಗಳಿಗೆಯುಳಿದೆ.
ಇರಲು ಇಂತು ಏತಕೇನೊ . . . . !
ಬರತುಹೋಯ್ತು ಬಗೆಯ ನಲಿವು ;
ಕೊರತೆಯೇನೊ ಬೆರೆತ ತೆರದಿ
ತೋರಿತಾಗ ಬನದ ಚೆಲುವು.

ತಳಿರು ಕಣ್ಣ ಕುಣಿಸದಾಯ್ತು,
ಅಲರ ನಗೆಯು ತಣಿಸದಾಯ್ತು,
ಬನದ ಬೆಡಗದೆಲ್ಲಿ ಹೋಯ್ತೊ . . !
ಮನೆಗೆ ಬಂದೆ ಹಾಗೆ ಮರಳಿ.
ಚೆಲುವು ಹಿರಿಯದೋ !–ಹೃದಯ-
ದೊಲವು ಹಿರಿಯದೋ . . . . !

೨

ಬಗೆದು ಬಗೆದು ನಲ್ಲನಗಲ
ದುಗುಡ ಮಿಗಲು–ಕಂಬನಿಗಳು
ಒಗೆಯುತಿರಲು–ಗಾನದಿಂದ
ಬಗೆಯು ಸೊಗಸಬಹುದೆ . . ? ಎಂದೆ.
ಕೊಳಲನೂದಿ ಅಳಲ ಮರೆತೆ,
ಉಲಿಯೆ ವೀಣೆಯದಕೆ ಬೆರತೆ,
ಮೆಲುಪು ಬಲಿದ ರಾಗದೋರಿ
ಕಳೆದೆ ಕಾಲ ಸೊಗವ ಸಾರಿ ;
ಇದ್ದುದಿದ್ದ ಹಾಗೆ ಹೃದಯ
ಎದ್ದು ನಡೆಯಿತೆಲ್ಲಿಗೇನೊ !
ಬಿದ್ದುಹೋಯ್ತು ಗಾನದಲ್ಲಿ
ಇದ್ದ ಸೊಬಗದೇತಕೇನೊ !
ಕೊಳಲ ಸವಿಯೆ ತಿಳಿಯದಾಯ್ತು,
ವೀಣೆಯುಲುಹು ಕಾಣದಾಯ್ತು,
ಚೆಲುವ ರಾಗದೆಳೆಯೆ ಹೋಯ್ತು,
ಮಲಗಿಬಿಟ್ಟೆ ಹಾಗೆ ಮರಳಿ.
ಚೆಲುವು ಹಿರಿಯದೋ !– ಹೃದಯ-
ದೊಲವು ಹಿರಿಯದೋ . . . .

# ಒಲವಿನಾಟ

ಎಂತಿರಲು ಬಹುದು ? ನನ್ನಾತನೆಂತಿರಬಹುದು.... ?

ಇಂದಿರಮ್ಮನ ಇನಿಯನಂತೆ ತಿಳಿಗಪ್ಪು-ಮೈ-
ಯಂದದರಳಿದ ಕಣ್ಣ, ತುಂಬುದಿಂಗಳ ಮೊಗದ
ತರುಣನಿರಬಹುದೊ.... ? ಇಲ್ಲದಿರೆ ಗೌರಮ್ಮನಾ
ಎರೆಯನಿಹನಲ್ಲವೇ ? ಆತನೊಲು ಕೆಂಗಣ್ಣೆ-
ನುರಿಮೊಗದ, ಬೆರಗಾಗಿಸುವ ವೇಷ-ಭೂಷಣದ
ಮರುಳನಿರಬಹುದೋ-?

ರಾಧಾಂಬೆಯವನಂತೆ
ಎಳಸಾದ ಕಳೆಯುಳ್ಳ ಮೆಲುನಗೆಗೆ ಮನೆಯಾದ
ಚದುರನಿರಬಹುದೊ...., ಅಲ್ಲದೆ ಶಾರದೆಯ ಮನೆಯ
ಮನ್ನೆಯನ ತೆರದಿ ಮುದುಡಿದ ಮೆಯ್ಯ ನರೆದಲೆಯ
ಮುದಿಯನಾಗಿರಬಹುದೊ....?

ಕಮಲಮ್ಮನವರ ಮಗ-
ನಂತೆ ಸೌಂದರ್ಯಸಾಗರನಿರಲು ಬಹುದೊ...., ಕಾ-
ಳಬ್ಬೆಯಣುಗನ ತೆರದಿ ಡೊಂಕುಮೋರೆಯ ಡೊಳ್ಳು-
ಹೊಟ್ಟೆಯವನಿರಬಹುದೊ....?

ಸಿರಿವಂತರಂತೆ ಸಡ-
ಗರದುಡುಗೆ ತೊಡಿಗೆಗಳ ಧರಿಸಿರಲು ಬಹುದೊ...., ಇರ-
ದಿರೆ ಬಡವರಂದದಲಿ ಬರಿಮೆಯ್ಯ ಅರೆಬತ್ತ-
ಲೆಯನಿರಲು ಬಹುದೊ . . ?

ಎಂತಿದ್ದರೇನೆನಗೆ ?
ಎಂತಾದರೂ ಇರಲಿ, ಅವನೆನ್ನ ನನ್ನಿಯಾ
ನಲ್ಲನಲ್ಲವೆ ? ನಲ್ಮೆಯೊಡೆಯನಲ್ಲವೆ ? ಜಗದಿ
ಬೇಕಾದರಾ ಬೇವೆ ಮಾವಹುದು, ಬೇಡವಿರೆ
ಮಾವು ಬೇವೆನಿಸುವುದು ; ಹೃದಯದೊಲವಿನದೊಂದು
ಅದುಭುತದ ಆಟವಿದು ! ಆರಾರಿಗೂ ಅರಿದು !

“ ಹೃದಯದೊಲವದು ಹೊರಗಣಾವಕಾರಣಗಳನು
ಹೊದ್ದಿ ಆಸರಿಸಿರದು, ಒಳಗಿರುವುದಾವುದೋ
ತಿಳಿಯದಂತಿರುವೆಳೆತ ಸೆಳೆದು ಬಿಗಿವುದು ಒಲವಿ-
ನೆದೆಗಳನು ” ಎಂದು **ಕವಿಭವಭೂತಿ** ಹೇಳಿರನೆ ?

# ಅವನ ಕತೆ

ಮಧ್ಯಮಾವತಿ

ಕೇಳಿದೆನು ನಾನೆನಿತೊ ನನ್ನವ-
ನೇಳಿಗೆಯ ಕತೆಯನ್ನ,
ಹೇಳಿದರು ಹಲಜನರು ನೋಡಿದ
ಕೇಳಿದಾ ಸ್ಥಿತಿಯನ್ನ :

೧

ಎಳೆಯ ಬಿಸಿಲಲಿ ತಳಿರ ಮೆಲುಪನು
ಸಲಿಸಿ ಸಮೆದೊಡಲಂತೆ—
ಅಲರಿನರಳಿಕೆಯಾಯ್ದು ಬಲಿದಿಹ
ಕಳೆಯ ಕಣ್-ಮೊಗವಂತೆ—
ಚೆಲುವೆಯರ ಮನ ಸೆಳೆದು ಬಿಗಿಯುವ
ಚೆಲುವಿಕೆಯ ಬಲುಹವನದಂತೆ—
ಕೇಳಿದೆನು ನಾನೆನಿತೊ ನನ್ನವ-
ನೇಳಿಗೆಯ ಕತೆಯನ್ನ.

೨

ಆಡಿದರೆ ಸವಿನುಡಿಯ ಜೇನಿನ
ಗೂಡಿಗೆಣೆಯಹುದಂತೆ—
ಹಾಡಿದರೆ ಬ್ರಹ್ಮಾಣಿ ವೀಣೆಯ—
ನಾಡಿಸಿದ ತೆರನಂತೆ-

ಕೂಡಿಸಿದ ಕವನಗಳು ಬಗೆಯೊಳು
ಮೂಡಿ ಮುಡಿದೂಗಿಸುವವಂತೆ—
ಕೇಳಿದೆನು ನಾನೆನಿತೊ ನನ್ನವ-
ನೇಳಿಗೆಯ ಕತೆಯನ್ನ.

೩

ಹರಳ ಬಿರುಸನು ಅರಳ ರಸದಲಿ
ಬೆರಸಿ ಬೆಸೆದೆದೆಯಂತೆ—
ದುರುಳರಿಗೆ ಹಗೆ ಸರಳರಿಗೆ ನಗೆ-
ಯಿರುವ ಗರುವಿಕೆಯಂತೆ—
ಕರಿಕರೆದು ತಲೆಹೊರೆಯನಿತ್ತರು
ಸರಿಯದೈಸಿರಿಗರಸನಂತೆ—
ಕೇಳಿದೆನು ನಾನೆನಿತೊ ನನ್ನವ-
ನೇಳಿಗೆಯ ಕತೆಯನ್ನ.

೪

ಗೆಳೆತನಕೆ ತನ್ನನ್ನೆ ಮಾರುವ
ಛಲವು ಆತನದಂತೆ—
ಒಲುಮೆ-ಪಂಜರದೊಳಗೆ ಸುಲಭದಿ
ಸಿಲುಕುವಾ ಹುಲಿಯಂತೆ—
ಕೆಳೆಯೊಲುಮೆ ನನ್ನೊಳಗೆ ಕೊರತೆಯೆ ?
ಒಲಿಯದಿರುವನದೇತಕಂತೆ ?
ಕೇಳಿದೆನು ನಾನೆನಿತೊ ನನ್ನವ-
ನೇಳಿಗೆಯ ಕತೆಯನ್ನ.

# ಆಗಿದ್ದರೆ....!

ಧನ್ಯಾಸಿ

ಸತಿಯನಿತು ಪತಿಗೆ ಹತ್ತಿರದ ಜೊತೆಯಾ ಸತಿಗೆ
ಪತಿಯನಿತು ಬಳಿಯಾವುದಿಲ್ಲವಂತೆ !
ಕತೆಯ ಮಾತಿದು ! ಅಲ್ಲದಿರಲು ನಮ್ಮಿಬ್ಬರೊಳು
ಅತಿ ದೂರದಂತರವಿದೇತಕಂತೆ ?

ಮಡದಿಯಲ್ಲದೆ ಅವನ ಮುಡಿಗೆ ನಾನಾಗಿದ್ದ-
ರಿಡಿಬಿಡದೆ ಇರುತಿದ್ದೆ ಮುಡಿಯ ಮೇಲೆ,
ಮುಡಿಗೆ ಹೋಗಲಿ ಅಡಿಯ ತೊಡವದಾಗಿದ್ದರೂ
ಅಡಿಯೊಂದಿ ಇರುತಿದ್ದೆನೇನು ಕೇಳೇ ?

ಕೊರಳ ಮಣಿಮಾಲೆಯಾಗಿರುತಿದ್ದರೆನಿತೊಳಿತೊ !
ಅರಸನೆದೆಯಪ್ಪಿನಾ ಮೊರೆಯುತಿದ್ದೆ.
ಕೊರಳಸರ ಬೇಡ ಕಿರುಬೆರಳಿನುಂಗುರವಿರಲು
ಕರವ ಬಿಟ್ಟಿರದೆ ಸುಖ ಸುರಿಯುತಿದ್ದೆ.

ಚೆನ್ನ ನಡುವಿನೊಳಿಟ್ಟ ಚಿನ್ನದೆಳೆಯುಡುದಾರ
ಪುಣ್ಯವೆನಿತನ್ನು ಮಾಡಿರುವುದೇನೋ !
ಹೆಣ್ಣನಲ್ಲದೆ ನನ್ನ ಚಿನ್ನದೆಳೆಯನ್ನಾಗಿ
ಹಣ್ಣಿದ್ದರಾ ವಿಧಿಗೆ ಹಾನಿಯೇನೋ !

ತಂಬುಲವೆ ನಾನಾಗಿ ಜನಿಸಿದ್ದರಿನಿಯನಾ
ಚೆಂಬವಳದುಟಿ ಸೋಂಕಿ ನಲಿಯುತಿರ್ದೆ,
ಹೆಂಬನುಕನೇಕೆ ಹಾಕಿತು ದೈವ? ಇನಿತೊಂದು
ಹಂಬಲಿಸಿ ಹಂಬಲಿಸಿ ಹಲುಬಲೆಂದೇ ?

ಸತಿಯನಿತು ಪತಿಗೆ ಹತ್ತಿರದ ಜೊತೆಯಾ ಸತಿಗೆ
ಪತಿಯನಿತು ಬಳಿ ಯಾವುದಿಲ್ಲವಂತೆ,
ಕತೆಯ ಮಾತಿದು ! ಅಲ್ಲದಿರಲು ನಮ್ಮಿಬ್ಬರೊಳು
ಅತಿ ದೂರದಂತರವಿದೇತಕಂತೆ !

# ನಿರೀಕ್ಷೆ

ಮೋಹನ

೧

ಮೂರು ದಿನಗಳು ಜಾರಿದುವು, ಬರಿ-
ದಾರ್‍ಕಿ ಕಾಯುತಲಿರುವೆನು.
ಹಾರಯಿಕೆಯೆಂತಹದು! ನನ್ನವ
ಬಾರನೇಕೆನುತಿರುವೆನು.
ಬರುವೆನೆನ್ನುವ ಓಲೆಯಿಲ್ಲವ-
ನರುಹಿದೊಸಗೆಗಳಿಲ್ಲ,
ಬರುವನೆನ್ನುತ ಬಗೆಯಿದೇನೋ
ಮೊರೆಯುತಿದೆ ಸುಳ್ಳಲ್ಲ.
ಎಂತಲೇ ದಿನವೆಲ್ಲಾ . . . .
ಎಂತಲೇ ದಿನವೆಲ್ಲ ಹೀಗೆಯೆ
ನಿಂತು ನಿರುಕಿಪೆನಲ್ಲಾ!

೨

ಸದ್ದನಾವುದ ಕೇಳಿದರೆ ಜು-
ಮ್ಮೆದ್ದ ಮೈಮನದಿಂದ
ಎದ್ದು ನೋಡುವೆ ಇನಿಯನೆಂದೇ
ಹೊದ್ದಿದಾತುರದಿಂದ.
ಆತನಲ್ಲದೆ ಇರಲು ಬಯಕೆಯು
ಬೀತು ಬಳಲಿಕೆಯಾಂತು,
ಕಾತರದಿ ಬಂದೊಳಗೆ ಬೀಳುವೆ–
ಕಾಯ್ದು ಸುಯ್ದುಲಿ–ಸೋತು.

ಮತ್ತೆ ಆಶೆಯು ಕೂಗಿ . . . .
ಮತ್ತೆ ಆಶೆಯು ಕೂಗಿ ಕರೆಯಲು
ಒತ್ತಿ ಏಳುವೆ ಬೇಗಿ.

೩

ದೂರ ಬರುತಿರಬಹುದು ನನ್ನಾ
ನೀರನೆಂಬ ವಿಚಾರದಿ,
ಏರಿ ನೆಲೆಮನೆ ಹುಬ್ಬಿನೊಳು ಕೈ-
ಯೂರಿ ನಿರುಕಿಪೆ ದೂರದಿ ;
‘ ಏನಿದಿವಳಾರನ್ನು ನೋಡುವ-
ಳೇನಿದಾತುರ ? ’ ಎನ್ನುತ
ಆಡುವುದೆ ಜನ ?–ಎಂದು ಸುತ್ತಲು
ನೋಡುವೆನು ನಾನಂಜುತ
ಬರಲಿರುವನವನೆಂದು . . . .
ಬರಲಿರುವನೆಂಬೀ ಬಗೆಯ ಬರಿ–
ಮೊರೆತಕೇನೆನಲಿಂದು ?

*   *   *

ಮೂರು ದಿನಗಳು ಜಾರಿದುವು ಬರಿ-
ದಾರಿ ಕಾಯುತಲಿರುವೆನು.
ಹಾರಯಿಕೆಯೆಂತಹದು ? ನಲ್ಲನು
ಬಾರನೇಕೆನುತಿರುವೆನು.

# ಕರೆವೆನೇನೆಂದು

ಸೋಹನಿ

ಮನದನ್ನನೊಳು ಸೇರಿ ಇನಿವಾತೊಳಿರುವಂದು
ಮನಮುಸವು ಬೆರೆವಂತೆ ಕರೆವೆನೇನೆಂದು ?

‘ ಚೆಲ್ವ ’ ಎಂದೆನಲೆ ! ‘ ಪ್ರಿಯವಲ್ಲಭಾ ’ ಎಂದೆನಲೆ !
‘ ನಲ್ಲ ’ ಎಂದೇ ಕೂಗಿ ಕರೆದುಬಿಡಲೆ !
‘ ಚೆನ್ನ ’ ಎನ್ನುವುದಿಂಪೊ ! ‘ ರನ್ನ ’ ಎಂದರೆ ಸೊಂಪೊ !
‘ ನನ್ನೊಲವೆ ’ ಎಂದು ಕೂಗುವುದೆ ಪೆಂಪೊ ?

‘ ಮನಮೋಹನಾ, ಪ್ರೇಮವನಧಿ, ಪ್ರಾಣಪ್ರಿಯಾ,
ಮನದಿನಿಯ ’ ಎಂಬುವರೊಳಾವುದಂದ ?
‘ ಚಿತ್ತರಂಜನ ’ ಎನಲೆ ! ‘ ಉತ್ತಮೋತ್ತಮ ’ ಎನಲೆ !
‘ ಮುತ್ತು-ಮಾಣಿಕ ’ ಸರಿಯೆ ? ಅಲ್ಲ ಚೆಂದ !

‘ ಅರಗಿಳಿಯೆ ’ ಎಂದರದು ಕಿರಿಯರಿಗೆ ಒಪ್ಪೀತು,
‘ ನರಸಿಂಹ ’ ಎಂದರದು ಬಿರಸು ಮಾತು,
‘ ಕರ್ಪ ಕಂಕಣ ! ’ ಪಾಡೆ ? ‘ ಕೊರಳಮಣಿ ! ’ ಎನೆ ಕಾಡೆ ?
‘ ಸಿರಿಮುಡಿಯ ಸೌಭಾಗ್ಯ ! ’ ಎನಿದೊಳಿತು ?

ಯಾವ ಹೆಸರಿಂದೆ ಕರೆದರೆಯು ಕಾಂಬನು ನನ್ನ
ಜೀವದಿಂದಿನಿಯನವ ಭಿನ್ನನೆಂದು,
ಜೀವ-ಜೀವಾಳವಾ ದೇವನೇ ಎನಿಸುವಂ-
ತಾವ ಹೆಸರಿಂದೆ ನಾ ಕರೆವೆನಿಂದು ?

# ಏನಿದ್ದೇನು !

ಮಧ್ಯಮಾವತೀ

೧

ಚೆನ್ನ, ನಿನ್ನೊಡನಿದ್ದು ಬಾಳುವೆ-
ಯನ್ನು ' ಭಲೆ ' ಎಂಬಂತೆ ಸಾಗಿಸಿ
ಹೆಣ್ಣ ಬದುಕನು ಪೂರ್ಣಗೊಳಿಸಲು
ನನ್ನ ಹವಣಿಕೆ, ಎಂತಲೇ–
ನನ್ನ ಕೊರತೆಯನರಿತು ಗುಣಗಳ
ಹಣ್ಣ ಸುತ್ತಿಹೆನಿಂತೆಲೆ !

೨

ಮನೆಗೆ ಸಾರಣೆಯಿಕ್ಕಿ, ಕಾರಣೆ-
ಯನುಗೊಳಿಸಿ, ಹೊಸ ರಂಗವಲ್ಲಿಗ-
ಳನು ಬರೆಯಬೇಕೆನುತ ಮನದಲಿ
ಎಣಿಸಿ ಬಲ್ಲವರನ್ನು–
ಅನುಸರಿಸಿ ನಾನರಿತೆ ಚಿತ್ರದ
ಕೊನರು ಕುಸುರುಗಳನ್ನು.

೩

ದಣಿವು ನಿನಗೊದವಿರುವ ಸಮಯದಿ
ತಣಿಸಲಿಕೆ ಸರಿಯಾದ ಸಾಧನ-
ವೆನುತ ವೀಣೆ ಸತಾರು ಸಾರಂ-
ಗಿಣಿಯ ಬಾಜಿಸಲರಿತೆನು.
ಅನುವರಿತು ಬಹುರಾಗದೊಳು ಗಾ-
ಯನವ ಮಾಡಲು ನುರಿತೆನು.

೪

ನಿನ್ನ ಕಣ್ಣುಗಳೊಲಿಯುವಂದದಿ
ನನ್ನ ಮೈಯನು ಹಲವು ಚೆಂದದಿ
ಸನ್ನೆಸಿ ಸಿಂಗರಿಸುವಾ ಬಗೆ-
ಯನ್ನು ಹೇಳಿಸಿಕೊಂಡಿಹೆ,
ನಿನ್ನ ಮನ ಮೆಚ್ಚಿಸುವ ಬೆಡಗಿನ
ಬಿನ್ನಣಗಳನು ಕಂಡಿಹೆ.

೫

ಮುಂದೆ ನಿನ್ನನು ಕೂಡಿ ಬದುಕನು
ಹೊಂದಿಸುತ್ತಿರುವಂದು ಬೇಕೆಂ-
ತೆಂದು ಪರಿಪರಿ ಪಾತ್ರೆ ಪಡಿಗವ
ತಂದು ತಂದಿರಿಸಿರುವೆನು.
ಒಂದನೂ ಬಿಡದಂತೆ ಸವಿಯುಣಿ-
ಸಂದಗಳ ಕಲಿತಿರುವೆನು.

*　　　*　　　*

ಏನನೆಲ್ಲವ ಮಾಡಿರುವೆ, ಇ-
ನ್ನೇನ ಮಾಡುವೆ ನಲ್ಲ?
ನೀನು ಇಲ್ಲದೆ ಇರಲು ಏನಿ-
ದ್ದೇನು? ನಿಷ್ಫಲವೆಲ್ಲ!

# ಅಭಿಮಾನ

ಸಾವೇರಿ

೧

‘ ಇನಿತೊಂದು ಹಲುಬಿ ಕಂ-
‘ ಬನಿಯಿಡುವೆನವಗಾಗಿ
‘ ನೆನಪಾದರೂ ಇಹುದೆ ನನ್ನದವಗೆ ? ’
ಎನುವ ಯೋಚನೆ ಬರಲು
ಮುನಿಸು ಮೊಗದೋರಿ, ನಾ-
ನೆನುವೆ ‘ ಇನಿತೇಕೆ ಮನದಳಲು ನನಗೆ ? ’

೨

“ ನನ್ನರಿವು ಅವಗಿರದು
ಇನ್ನವನ ನೆನೆ-ನೆನೆದು
ಬನ್ನಬಡುತಿಹೆನೇಕೆ ? ನಾನು ತಿಳಿಯೆ !
ಮಾನಾಭಿಮಾನ ನನ-
ಗೇನು ಬೇಕಿಲ್ಲವೇ ?
ನಾನಿನ್ನು ಅವನನೆಂದೆಂದು ನೆನೆಯೆ ! ”

೩

ನೆನೆಯಬಾರದು ಎಂದು
ಎಣಿಸಿ ನಿರ್ಣಯಿಸುವೆನು,
ಎನಿತೆನಿತೊ ಆಣೆಗಳನಿಡುವೆ ನಾನು.
ಮನವನಿನ್ನೇತರೊಳೊ
ಹೆಣೆದವನ ಮರೆಯಲಿಕೆ
ಹಣುಗಿಯೇ ಹಣುಗುವೆನು, ಆದರೇನು !

೪

ಕಿಡುಗೇಡಿ ತಂಗಾಳಿ-
ಯೊಡನೆ ಬಂದಾ ನೆನಹು
ಒಡಲ ಜುಁವ್ವೈನಿಸಿ ನವಿರೇರಿಸುವುದು.
ಬೆಳುದಿಂಗಳೊಡಗೊಂಡು
ತಿಳಿಯದಂತೈತಂದು
ಕಳವಳವ ಕರುಳಿನೊಳಗೂರಿಸುವುದು.

೫

ತನ್ನವಳ ಜೊತೆಗೂಡಿ
ಹಾಡುತಿಹ ಹಕ್ಕಿಯುಲಿ
ತನ್ನ ಮಟ್ಟಕೆ ಸುಮ್ಮನಿರಬಾರದೆ ?
ನನ್ನದೇನಿರಲು ಬಹು-
ದನ್ನೆಯವು ! ಅವನ ನೆನ-
ಪನ್ನು ಕಿವಿಗೊತ್ತಿ ಕಾಡುವುದು ಬರಿದೆ.

೬

ಸುಡಲಿ, ಬಂದಿತಿದೇಕೊ
ಜಡಿಯ ಮೋಡದ ಜಿನುಗು !
ಹಿಡಿದು ಬೆಸೆವುದು ಆತನಾಶೆಯೊಡನೆ,
ಇಡಿದ ಕತ್ತಲೆಯಿರುಳು
ಮಿಡುಕುತೊಬ್ಬಳೆ ಮಲಗಿ-
ಪೆಡೆಗೆ ಕಳುಹುವುದವನ ಬಯಕೆಯನ್ನೇ.

೭

ಮುಳಿಸು ಹೆಮ್ಮೆಗಳಲ್ಲಿ
ಮಾಡಿದಾ ನಿರ್ಣಯವು
ಗಳಿಗೆಯರೆಗಳಿಗೆಯೂ ನಿಲ್ಲದಿಹುದು.
ನನಗಿರುವ ಆತುರವು
ಇನಿಯಗೇಕಿರದೆಂದು
ಜಿನುಗಿ ನನ್ನೆದೆಯುಸಿರ ಚೆಲ್ಲುತಿಹುದು.

೮

‘ ಇನಿತೊಂದು ಹಲುಬಿ ಕಂ-
‘ ಬನಿಯಿಡುವೆನವಗಾಗಿ
‘ ನೆನಪಾದರೂ ಇಹುದೆ ನನ್ನದವಗೆ ? ’
ಎನುವ ಯೋಚನೆ ಬರಲು
ಮುನಿಸು ಮೊಗದೋರಿ ನಾ-
ನೆನುವೆ ‘ ಇನಿತೇಕೆ ಮನವಳಲು ನನಗೆ ? ’

# ಮಿಂಚಿನ ನೋಟ

ಗಝಲ್

೧

ಕೂಗು ಕೂಗೆಲೆ ಕೋಗಿಲೆಯೆ ನೀ
 ಗಳಪುತಿರು ಇರು ಅರಗಿಣಿ !
ಏಗಲೂ ನುಡಿ ಕೊಳಲೆ, ವೀಣೆಯೆ–
 ರಾಗಿಸಲಿ ನಿನ್ನಾಧ್ವನಿ !
ನಿಮ್ಮ ಉಲುಹಿನೊಳೆಲ್ಲಾ . . . .
ನಿಮ್ಮ ಉಲುಹಿನೊಳೆಲ್ಲ–ಕೇಳುವೆ
 ನಮ್ಮವನ ಸವಿಸೊಲ್ಲಾ.

೨

ತುಂಬುದಿಂಗಳ ಬಿಂಬವೇ ನೀ
 ಕಾಂಬೆಯೇಕೊಂದೇ ದಿನ ?
ಅಂಬರದಿ ನಗುತಿದ್ದರಾಗದೆ–
 ಇಂಬು ಬಿಡದೆಯೆ ದಿನದಿನ ?
ನಗುಮೊಗದ ನಿನ್ನಲ್ಲಿ . . . .
ನಗುಮೊಗದ ನಿನ್ನಲ್ಲಿ ರಮಣನ
 ನಗೆಯ ಬಗೆಯಿಹುದಲ್ಲಿ !

೩

ತನಿರಸವನೆಲ್ಲಿಂದ ತಂದಿರಿ
ಹಣ್ಣು-ಹಂಪಲವೇ ?
ಇನಿದನೆಲ್ಲಿಂದೆಳೆದಿಹಿರಿ ಕೆನೆ-
ವಾಲೆ ಜೇಂಗೊಡವೇ ?
ಬಲ್ಲೆ ನಾನಿದರಂದ . . . .
ಬಲ್ಲೆ ನಾ ತಂದಿರುವಿರಿನಿಯನ
ಬಾಯ ತಂಬುಲದಿಂದ.

೪

ಮುಡಿದ ಮಾಲೆಯ ಮೆಲ್ಲಿತಾಗಿಹ
ಬೆಡಗಿನಲರಿನ ಸೋಂಕದು
ಒಡೆಯನಪ್ಪುಗೆ-ಸೊಗವ ಮನದೆದು-
ರಿಡುವ ಸಾಧನವಹುದಿದು ;
ಆದರೇನಿದು ಎಲ್ಲಾ . . . .
ಆದರೇನಿದು ಎಲ್ಲವೂ ಬಲು-
ಬೇಗ ಬಯಲಹುದಲ್ಲಾ !

೫

ಎಲ್ಲವಿವು ತೋರುವುವು ನನ್ನೆದು-
ರಲ್ಲಿ ಮಿಂಚಿನ ಮಾಟವ
ನಲ್ಲನೊಡನಿರೆ ಸವಿವೆನವಿರತ-
ಎಲ್ಲವೀ ಸೊಗದೂಟವ
ಬರುವುದೆಂದಾ ಕಾಲ . . . .
ಬರುವುದೆಂದೋ ಎಂದು ನೂಕುತ-
ಲಿರುವೆ ದಿನಗಳನೆಲ್ಲ !

# ಬೇಡವೆನಗಿನ್ನೇನು !

ಮಾಲಕಂಸ

ಒಡೆಯ ನಿನ್ನಾಶೆಯೊಳೆ ತೊಡಕಿ ನಾ ಮಿಡುಕುತಿರೆ
ಹಡೆದಮ್ಮ ಕೂಗಿದಳು : " ಹುಡುಗಿ ಇಲ್ಲಿಗೆ ಬಾರೆ ! "
        ಜಡಭಾವದಿಂದ ಎಳೆದಿಡುತಲಡಿಗಳನು
        ನಡೆದು ಅವಳೆಡೆಗೆ ಕೇಳಿದೆ : " ಕರೆದುದೇನು ? "
ಕಿರುನಗೆಯ ನಗುತಮ್ಮ ಹೊರಮನೆಗೆ ಕರೆತಂದು
" ನಿರುಕಿಸೆಲ್ಲವ ನಿನ್ನದಿರುವುದಿದು " ಎಂದೊರೆದು
        ಹರಡಿರುವ ಒಡವೆಗಳನೆಲ್ಲ ತೋರಿದಳು,
        ಬೆರತು ನಾ ನಿಂತೆ ಬೆರಳಿರಿಸಿ ಬಾಯಿಯೊಳು.
ಬಣ್ಣಬಣ್ಣದ ಸೀರೆ ಹೊನ್ನ ಹೂ-ರವಿಕೆಗಳು !
ರನ್ನದೋಲೆಯು ಮುತ್ತು ಚಿನ್ನದಾಭರಣಗಳು !
        ಕುಸುರು ಕುಸುರಿನ ಹವಳ ಬೆಸೆದ ಕಂಕಣವು !
        ಹಸನು ಹೊಗರುಗುವ ಕಾಲ್ಕಡಗ ಪೈಜಣವು !
ಬಗೆಬಗೆಯ ಕಮ್ಮೆಣ್ಣೆ ಸೊಗಸೆನಿಪ ಪನ್ನೀರು !
ಮೃಗಸಾರ ಕರ್ಪೂರ ಅಗುರು-ಗಂಧದ ತಿಗುರು !
        ಹಣ್ಣುಹಂಪಲವು ಸವಿಯನ್ನದಿನಿಸುಗಳು !
        ಕಣ್ಣಸೆಳೆಯುವ ಹಲವು ಬಣ್ಣದರಳುಗಳು !
ನೋಡಿದೆನದೆಲ್ಲವನು, ನೋಡಿಯೇ ನೋಡಿದೆನು,
ಕೂಡಿಸಿದೆನದರಲಿಯೆ ಸೇದಿರುವ ನೋಟವನು.

‘ಎಲ್ಲವೂ ನನ್ನದಿದು’ ಎಂಬುದನು ನೆನೆದು
ಉಲ್ಲಸವು ಆಟವಾಡಿತು ಮನದಿ ಕುಣಿದು.
ಹಿಂಡುಹಿಂಡಾಗಿ ಹೆಣ್ಣುಗಳೆಲ್ಲೈತಂದು
ಕೊಂಡಾಡತೊಡಗಿದರು ನನ್ನ ದೈವವನಂದು.
ಕೊರೆಯುವೆದೆನೋವೆಲ್ಲ ಹೇಗೊ ಮರೆಯಾಯ್ತು
ಗರುವಿಕೆಗೆ ಮೈ-ಮನವದಾಗ ಸೆರೆಯಾಯ್ತು.
ಉಡುಗೆಯುಡಬಯಸಿದೆನು, ತೊಡಿಗೆಯಿಡಬಯಸಿದೆನು,
ಮುಡಿಬಿಗಿದು ಬೆಡಗಿನೊಳು ಮುಡಿವೆನೆಂದೆನು ಅರಳು
ತಂಪು ಬಾವನ್ನದಪ್ಪನು ಮೈಗೆ ತೀಡಿ
ಸೊಂಪಾಗಿರುವೆನೆಂದೆ ಸವಿಯುಣಿಸನೂಡಿ.
‘ಮುಂದೇನು? ಮುಂದೇನು?’ ಎಂದು ಯಾರೋ ಕೇಳಿ-
ದಂದ ಕಿವಿದೆರೆಗೈದಲೆದೆಯು ಜುಮ್ಮನು ತಾಳಿ
ತನುವೊಮ್ಮೆದೊಮ್ಮೆಯೇ ನವಿರಿಂಗೊಳಗಾಯ್ತು,
ಇನಿಯ ನಿನ್ನಯ ನೆನಹೆ ಮನತುಂಬಿಹೋಯ್ತು.
ಬಿಡುಬಿಡರಿತೆನು ನಿನ್ನ ಹುಡುಗಾಟವೆಲ್ಲವನು
ಹಡೆದಮ್ಮ ಹೇಳಿದಳು: ಒಡವೆಯಿವನೆಲ್ಲವನು
ನೀನೆ ನನಗಾಗಿಯೇ ಕಳುಹಿರುವೆಯಂತೆ!
ಏನು ಈ ಮೋಡಿಯಾಟವದೆಲ್ಲಿ ಕಲಿತೆ?
ತೊಡೆಯಲಿಕೆ ನೆನಹನೀನೊಡವೆಗಳ ಕಳುಹಿಸಿದೆ,
ಜಡಮತಿಯು ನಾನರಿವುಗೆಡುತವಕೆ ಬೆರಗಾದೆ.
ನಿನ್ನ ಮರಸುವ ಚಿನ್ನರನ್ನದೊಡಿಗೆಗಳು
ಮಣ್ಣುಗೂಡಲಿ ಹಾಳು ಬಣ್ಣದುಡುಗೆಗಳು!
ಬೇಡವೆನಗಿನ್ನೇನು! ಬೇಡವೆನಗಿನ್ನೇನು!
ಓಡಿ ಬಾ ದೊರೆಯೆ, ನೀನೇ ಬೇಕು ನೀನು!

# ಕೊರಗುತಿರುವೆದೆಗೆ ಬರೆ

ಸಾವೇರಿ

೧

ನೀಕೊಡುವುದೆಂದು ಮನೆ-
ಯಾಕೆಯಧಿಕಾರವನು ?
ಸಾಕಿದೇಕಾಕಿನಿಯ ಕಾಕುಬಾಳು !
ಹಾಕುತಿದೆ ಬರೆಯು ಮೊದ-
ಲೇ ಕೊರುಗುತಿರುವೆದೆಗೆ
ಲೋಕದಾ ಜನರ ಬಡತನದ ಗೋಳು.

೨

ನಿರುಕಿಸಿದರೆತ್ತಲೂ
ತಿರಿವವರ ತಂಡಗಳು
ಕುರುಡ-ಕುಂಟರು, ಕರುಣಗೀತದವರು !
ಕೊರೆವ ಚಳಿ ಬಿರುಬಿಸಿಲಿ-
ನರಿವಿಲ್ಲದಲೆ–ಕೂಳು
ದೊರಿಯದಿದ್ದರು–ದುಡಿವ ಜೀತದವರು !

೩

ಹಸಿವು ಹಸಿವೆಂಬುಲುಹು
ದೆಸೆಯ ಮುತ್ತಿದೆ, ಜನದ
ಬಸಿರ ಜೇಗೆಗೆ ಹಸಿರೆ ಬಾಡುತಿಹವು ;
ಹಸುಳೆಗಳು ಹಡೆದವರ
ಗಸಣಿಗಳೆಯಲಿಕೆಂದು
ಮಸಣದಲಿಂಪೇ ವಸತಿ ಮಾಡುತಿಹವು !

೪

ನೋಡುತಿಹೆನೆಲ್ಲವನು
ನೀಡು-ನೋಟಗಳಿಂದೆ,
ಮಾಡುವೆನದೇನು....! ಬಿಸುಸುಯ್ಯುವದೊಂದೆ ;
ನಿನ್ನೆಲ್ಲ ಹೊನ್ನು ಹಣ
ನನ್ನದಾಗಿದ್ದರೂ
ಚೆನ್ನ! ಬರಿಗೈ-ಬಡವಿಯಿರುವೆನಿಂದೆ.

೫

ಒಡೆಯ ನೀನೊಲಿದು ನಿ-
ನ್ನೊಡವೆಯೆಲ್ಲವ ನನ್ನ
ಒಡೆಯತನಕೊಪ್ಪಿಸಿ ಅದೆಂದು ಕೊಡುವೆ ?
ಕೊಡಲು ತಿರೆಯನೆ ತಿನುವ
ಬಡತನದ ಭೂತವನು
ಹೊಡೆದು ಹಸಿವಿನ ಪಿಡುಗ ತೊಡೆದೆ ಬಿಡುವೆ !
ದೈನ್ಯದಾ ದನಿಯ ಕರುಣದ ಮೊರೆಯ ಕೂಗ
ಇನ್ನೊಮ್ಮೆ ಕೇಳದಂತಾಗಿಸುವೆನಾಗ.

# ಹಾರಯ್ಕೆ

ಗರ್ಝುಲ್

೧

ಕೆಳದಿಯರನೊಡಗೊಂಡು ಕೆಲೆಕೆಲೆ-
   ದುಲಿದು ಮೇಲಕೆ ಹಾರಿ,
ಇಳೆಯವರನಣಕಿಸುತೆ ಪಕ್ಕವ
   ಕೆಳರಿ ಬಾನೆಡೆಗೇರಿ,
ತಳರುತಿಹೆ ನೀನೆಲ್ಲಿ ? ಹಕ್ಕಿಯ
   ಕುಲದರಸೆ ಹೇಳಿಲ್ಲಿ !
ಗೆಳೆಯನೆಡೆ ದೊರೆಯುವುದೆ ನೀನಡೆ-
   ದುಳಿವ ದಾರಿಯೊಳೆಲ್ಲಿ ?
ದೊರೆತರಾತಗೆ ನೀನು . . . .
ದೊರೆತರಾತಗೆ ನನ್ನ ಬಾಳಿನ
   ಕೊರಗನರುಹುವೆಯೇನು ?

೨

ಆಳತೆಯಿಲ್ಲದ-ಹೊಳೆವ-ಕೈಗಳ
ಕಳುಹಿ ವಿಶ್ವದೊಳೆಲ್ಲಾ
ಬೆಳಕುಬಣ್ಣದ ಬಳೆವ ತಾವರೆ-
ಗೆಳೆಯ ಲಾಲಿಸು ಸೊಲ್ಲಾ !

ನನ್ನ ಮನದಳಲನ್ನು ಬರೆದಾ
ಬಿನ್ನವತ್ತಳೆಯನ್ನು
ಚೆನ್ನನಿರುವಲಿ ಕಳುಹಲಿಹೆ, ನೆರ-
ವನ್ನು ನೀಡುವೆಯೇನು ?

ಒಂದೆ ಒಂದಾ ಕೈಯ . . . .
ಒಂದೆ ಕಿರುಗೈ ಕಳುಹಿ ಓಲೆಯ-
ನೊಂದಿಸಾತಗೆ ಜೀಯ !

೩

ಮುಮ್ಮಳೆಯ ಕಮ್ಮುಗಿಲ ಸಿಡಿಲೇ
ಹೆಮ್ಮಗಳ ಮೊರೆಕೇಳಿ .
ಒಮ್ಮೆ ಒಂದೇ ನಿಮಿಷ ಕೊಡುವಿರೆ
ನಿಮ್ಮ ಗುಡುಗನು ? ಹೇಳಿ !

ನಲ್ಲನೆಲ್ಲಿಹನೇನೊ ! ನನ್ನದು
ಮೆಲ್ಲುಲಿಯ ದನಿ ಕೇಳದು,
ಎಲ್ಲಿಯೇ ಇರಲವಗೆ ಸುದ್ದಿಯ
ಸಲ್ಲಿಸಲೆ ಬೇಕಿರುವುದು,

ಗುಡುಗಿನಾ ಮೊಳಗಿಂದೆ . . . .
ಗುಡುಗಿ ಗರ್ಜಿಸಿ ನನ್ನ ನೆನಹನು
ಕೊಡುವೆನಾತನಿಗಿಂದೆ.

೪

ಗಗನದೊಳು ತೇಲಾಡುತಾಡುತ
  ನಗುವ ಚುಕ್ಕಿಯ ಬಳಗವೆ,
ಸೊಗಸು ನಿಮ್ಮದು ಬದುಕು ನೀವೀ
  ಜಗದ ಸಾಕ್ಷಿಗಳಲ್ಲವೇ ?
ಮಿಣುಕುನೋಟದೊಳೇನನೆಲ್ಲವ-
  ನಿಣುಕುತಿಹ ಧ್ರುವತಾರೆಯೆ,
ಕ್ಷಣವೆ ನಿನ್ನಯ ಕಣ್ಣಬಲುಹನು
  ನನಗೆ ನೀಡುಪಕಾರಿಯೆ !
ಅವನನೊಮ್ಮೆಯೆ ನೋಡಿ . . . .
ಅವನ ನೋಡುತ ನಲಿದು ಹಾಡುವೆ
  ಕವನ ನಿನ್ನದು ಮಾಡಿ.

೫

ಬೇಸಗೆಯ ಬಿರುಗಾಳಿ, ನಿನ್ನದಿ-
  ದೇಸು ನಡಿಗೆಯ ವೇಗ ?
ತಾಸುಹೊತ್ತಿರವದನು ಕೊಟ್ಟರೆ
  ಗಾಸಿ ನಿನಗೇನೀಗ ?
ನಿನ್ನ ತೆರದೊಳೆ ನೀರು-ನೆಲ-ಮುಗಿ-
  ಲೆನ್ನದೆಯೆ ನಾ ಹಾರಿ,
ಚೆನ್ನನಿರುವಲಿ ತೆರಳುವೆನು, ಆ-
  ನನ್ನಿಕಾರನ ಸೇರಿ
ಬೆರೆಯುವೆನು ನಾನಾಗ . . . .
ಬೆರೆಯುವೆನು ನಾನಾಗ ಪಡೆವುದಃ
  ಮರಳಿ ನಿನ್ನಯ ವೇಗ.

# ಯಾವ ದಾರಿಯೊ !

ನಾದನಾಮಕ್ರಿಯಾ

೧

ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !
ಭಾವಿಸುತ ಬಾಯ್ದೆರೆದು ಕುಳಿತರೆ
ಸಾವೆ ಸರಿ ! ಎಂಬಾ ವಿಚಾರದಿ
ಜೀವದರಸನದೆಲ್ಲಿರುವನಾ
ಠಾವನರಸುತ ತೆರಳಲಿರುವೆ ;
ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು.

೨

ದೇಶವಲೆದವನೆಂದು ನಾ ಸಂ-
ನ್ಯಾಸಿಯೊಬ್ಬನನಿಂದು
ಹಾರಯಿಸಿ ಕೇಳಿದರೆ ಆತನು
ತೋರಿಸುತ ತೆಂಕಣವ ಬೆರಳಲಿ :
' ಸಾರು ಈ ದಾರಿಯೊಳು ನಿನ್ನವ-
ನೂರ ಸೇರುವೆ ನೇರ ' ಎಂದನು.
ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !

೩

ಕೇಳಿದರೆ ಯಾಜಿಗಳನಾಗಲಿ
ಹೇಳಿದರು ಬಲಿ ಕೊಡುತಲೆ :

" ಬೇಳುಮರಗಳ ಸಾಲುದಾರಿಯು
ಕೇಳಿ ಬಲ್ಲೆಯೆ ? ಹಾಗೆ ಹೋದರೆ
ನಾಳೆಯೇ ನೋಡುವೆಯೆ ನಿನ್ನ-
ನ್ನಾಳುವವನಾಳಿಯನು " ಎಂದರು.

ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !

೪

ಯೋಗಿರಾಜಯ್ಯನಿಗೆ ನಾ ತಲೆ-
ಬಾಗಿ ವಿನಯದಿ ಕೇಳಿದೆ.

ಮುಗಿದ ಕಂಗಳನಗಲಿಸದೆ, ತುಟಿ-
ಬಿಗಿದ ಬಾಯನು ಚಿಚ್ಚದೆಯೆ, ಕೈ-
ಮುಗಿಲ ಕಡೆ ನೀಡಿದನು; ತಿಳಿಯದೆ
ವಿಗಡತನವದು ನಗುತ ಮರಳಿದೆ.

ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !

೫

ಭಾಗವತದಾ ದಾಸರಲ್ಲಿಗೆ
ಹೋಗಿ ಕೇಳಿದೆ ಮೆಲ್ಲಗೆ.

' ವಿಟ್ಠಲನ ಗುಡಿಯೆದುರ ಬೀದಿಯೊ-
' ಳಿಟ್ಟು ಅಡಿಯನು ಮುಂದೆ ಸಾಗಲು

‘ನೆಟ್ಟನೆಯದಾ ಬಟ್ಟೆ, ಸೇರುವೆ
‘ತಟ್ಟನೆಯೆ ನಿನ್ನವನನೆಂ’ದರು.
ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !

೬

ಬುದ್ಧಿ ಶಾಲಿಗಳೆನಿಸಿಕೊಂಬರ
ಹೊದ್ದಿ ಹಾದಿಯ ಕೇಳಿದೆ.
ಇದ್ದ ಊರನ್ನುಳಿದು ಬೇರೆಯ
ಸುದ್ದಿಯನೆ ನಾವರಿಯೆವೆಂದರು ;
ವೊದ್ದುತನವೇನೆಯ್ದು ಬೇಕವ-
ನಿದ್ದೆಡೆಯ ನಾನೆಂಬುದಿದುವೇ !
ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !

೭

ಜೋಯಿಸರ ಕೇಳಿದೆನು ಬಗೆಬಗೆ-
ಕಾಯಕಿಗಳನು ಕೇಳಿದೆ.
ಬೇರೆ ಬೇರೊಂದೊಂದು ದಾರಿಯ
ತೋರಿಸಿದರೊಬ್ಬೊಬ್ಬರೂ ಎನೆ
ಗಾರುಗೊಂಡಿತು ಮನವು ; ಯಾವುದು
ತೋರದೆಯೆ ತೊಳಲುತ್ತಲಿಹೆನು.
ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾಗಲು !

೮

ಎಲ್ಲರೂ ಅಂತಿರಲು ಬಹುದೇ
ನಲ್ಲನೆಡೆಯನು . . . . ! ಅಲ್ಲದೆ–
ಎಲ್ಲರೂ ಬಳಸಿರಲು ಬಹುದೇ–
ಸುಳ್ಳನೇ ಬರಿ . . ! ತಿಳಿಯದೊಂದೂ,
ನಲ್ಲನೊಡನಿದ್ದೆನ್ನ ನೆನಹದೆ
ಟೊಳ್ಳು ಕನಸಾಗಿರಲು ಬಹುದೇ . . !
ಯಾವ ದಾರಿಯೊ ಕಾಣೆ ನನ್ನಯ
ದೇವನಿರುವೆಡೆ ಸಾರಲು !

# ಉನ್ಮಾದಿನಿ

## ವಸಂತ

೧

ಬಂದೆ ಬರುವನಂತೆ ಆತ
ಬಂದೆ ಬರುವನಂತೆ !
ಚೆಂದದೊಸಗೆಯನ್ನು ಕೇಳಿ
ನವಿರ ಹೊರೆಯನಾಂತೆ !
ನಿಂದೆ ಮರುಳೆಯಂತೆ . . . .
ನಿಂದೆ ಮರುಳೆಯಂತೆ, ನೆರೆಯೆ
ವೈಮರೆವಿನ ಸಂತೆ.

೨

ಇನಿಯ ಬರುವ ಮೊದಲೆ ನನ್ನ
ಮನೆಯನೆಂತು ಮಿನುಗಿಸುವೆ ?
ಮನಸು ಮೆಚ್ಚಿ ತಕ್ಕಿಪಂತೆ
ತನುವನೆಂತು ತೊಳಗಿಸುವೆ ?
ಬರಲು ನಿಲುವೆನೆಂತು . . . . ?
ಬರಲು ನಿಲುವೆನೆಂತು ? ಆವನ
ಕರೆದು ನುಡಿವೆನೆಂತು ?

೩

ಆತನನೆಂತಾದರಿಸಲಿ ?
ಆಸನವಾವುದನಿರಿಸಲಿ ?
ಪ್ರೀತಿ ಯಾವ ರಸದೊಳೇನೊ !
ಪಾಕವನಾವುದ ತರಿಸಲಿ ?

ತಿಳಿಯಲೊಲ್ಲದೊಂದು . . . . !
ತಿಳಿಯಲೊಲ್ಲದೊಂದು, ಅವನ
ತಣಿಸುವ ತೆರನಿಂದು !

೪

ತಣಿಸುವ ತೆರನೊಂದರಿಯದೆ,
ತಿಳಿದ ಜನರೊಳಾರಯ್ಯದೆ,
ಇನಿಯನ ನೋಡಲಿಕೆ ಬರಿದೆ
ಹಲುಬಿದೆ; ಬಲು ಹುಚ್ಚಿಯಾದೆ;
ನೋಡುವೆನವನನ್ನು . . . . !
ನೋಡುವೆನವನನ್ನು, ಆಗ
ಮಾಡಲಿ ನಾನೇನು ?

೫

ಮಾಡದಲಾವಾವುದನೂ
ಮೋಡಿವಡೆದ ತೆರದಿ ನಾನು
ನೋಡುತಲಾತನನೆ ನಿಂತು,
ಬೇಡಿಕೊಳುವೆ ನಯದೊಳಿಂತು :
"ನೋಡು ಒರೆಗೆ ಹಚ್ಚಿ . . . . !
"ನೋಡು ಒರೆಗೆ ಹಚ್ಚಿ, ದೊರೆಯೆ
ನಾನಿರುವೆನು ಹುಚ್ಚಿ !"

೬

" ನಿನ್ನ ಕಾಂಬ ಉನ್ಮಾದದಿ
ಇನ್ನಾವುದನರಿಯದವಳು,
" ನಾಣು ಜಾಣು ರೀತಿ ನೀತಿ
ಮಾನಾದರ ಕಾಣದವಳು,

“ ನೀನೆ ಹೇಳು ನಲ್ಲಾ . . . . !
“ ನೀನೆ ಹೇಳು ನಲ್ಲ, ಮಾಡ-
ಲೇನು ನಾನದೆಲ್ಲಾ ! ”

೭

ಬಿನ್ನವಿಸಲು ನನ್ನೀ ಕತೆ
ಉನ್ಮಾದಿನಿಯಿವಳೆನ್ನುತೆ
ಚೆನ್ನ ಮರಳಿ ತೆರುಳುವನೇ–
ನನ್ನೊಳು ಕೀಳ್‌ಗಣ್ಣಿರಿಸುತೆ ?
ಅಹುದೆ ತೆರಳಬಹುದೇ . . . . ?
ಅಹುದೆ ತೆರಳಬಹುದೆ ? ಅವಗೆ
ನನ್ನಿರವಿದು ಅರಿದೇ ?

೮

ನನ್ನಿರವಿದು ತಿಳಿಯದೇನು ?
ಮನ್ನೆಯನವ ಮರುಳನೇನು ?
ನನ್ನಿಯು ತನಗಾಗಿ ಈಕೆ
ಉನ್ಮಾದಿನಿಯಾದಳೆನುತೆ
ಕರೆವ ಕರುಣೆಯಿಂದೆ . . . .
ಕರೆವ ಕರುಣೆಯಿಂದೆ, ನನ್ನ-
ನಿರಿಸಿಕೊಳುವ ಮುಂದೆ.
ಇರಿಸಿಕೊಳುವ ಮುಂದೆ, ಒಡನೆ
ಬೆರೆವ ನಲುಮೆಯಿಂದೆ.

# ನನ್ನ ಹಾಡು

ಭೈರವಿ

೧

‘ ಬರಿಯೆ ಬಿಸುಸುಯಿಲಿಂದಲೀ ಹಗ-
ಲಿರುಳ ಕಳೆಯುವುದೇನು–
ಸರಿಯೆ ! ’ ಎನುತೇನೇನೊ ಹಾಡುತ-
ಲಿರುವೆನೇಗಲು ನಾನು.

ನನ್ನ ಹಾಡುಗಳೆಲ್ಲವಿವು ಮನ-
ದನ್ನ ನಿನಗಾಗಿರುವುವು ;
ನನ್ನ ಹಾಡಿನ ವರ್ಣ-ವರ್ಣವು
ನಿನ್ನನೇ ಕುರಿತಿರುವುವು ;

ನಿನ್ನ ನೆನಹನೆ ಮೊರೆವುವು . . . . !
ನಿನ್ನ ನೆನಹನೆ ಮೊರೆವುವೆಲ್ಲವು
ನಿನ್ನ ಕರೆಯುತಲಿರುವುವು.

೨

ಹಾಡ ಕೇಳುತ ಜನಗಳೆಲ್ಲರು
ಖೋಡಿಗಳೆಯುತೆ ನನ್ನ
ಏಡಿಸುತ ನಗೆಯಾಡುತಿರುವುದ
ನೋಡುತಿರುವೆನು ಚೆನ್ನ !

" ಏನು ಹಾಡಿನ ರಾಗ ! ಅಳುವಿನ
ತಾನಗಳೆ ತುಂಬಿರುವುವು ! "
" ಏನು ಮಾತಿನ ರೀತಿ ! ಬರಿ ತಿ-
ಲ್ಲಾಣವೋ ಎಂದೆನಿಪುವು ! "

ಎಂಬವರ ನುಡಿ ಕೇಳಿ . . . .
ಎಂಬವರ ನುಡಿ ಕೇಳಿ 'ಅಯ್ಯೊ !'
ಎಂಬೆ ಮರುಕವ ತಾಳಿ.

೩

ಬಾಳು ನನ್ನದು ಅಳಲ ಹೊಳೆಯೊಳೆ
ತೇಲಿ ಮುಳುಗುತಲಿರುವುದು.
ಹೇಳುವೀ ಹಾಡೊಳಗೆ ಬೇರೆಯ
ಭಾವವೆಂತದು ಬರುವುದು ?

ಹಾಡು ಕವನಗಳಲ್ಲಿ ಬದುಕೇ
ಮೂಡಿಕೊಂಡಿರದೇನು ?
ನೋಡಿರದ ವಸ್ತುವನು ಚಿತ್ರದಿ
ಕೂಡಿಸಲು ಬಹುದೇನು ?

ಏನೆ ಜನವೆನಲೀಗ . . . .
ಏನೆ ಜನವೆನಲೀಗ ಹಾಡುವೆ
ನಾನು ನನ್ನಯ ರಾಗ !

೪

ಉರಿವ ಬೇಗೆಗೆ ಸಿಡುಕಿಕೊಂಡವ-
ನೊರಲುವಾ ನುಡಿಯರ್ಥವು
ಹೊರಗೆ ನಿಂತವಗಾಗುವುದೆ ಅವ-
ನರಿಯೆನೆಂಬುದು ವ್ಯರ್ಥವು

ಇರುಳು ಹಗಲಿನ ಸಿರಿಯು ಬಣ್ಣಿಸೆ
ಕುರುಡನರಿಯುವನೇನು !
ಇರುಹು-ತಿಳಿಯದೆ ನನ್ನ ಹಾಡನು
ಜರಿದರಾಗುವುದೇನು !

ಬರಿಯೆ ತರನನವೆಂದು . . . .
ಬರಿಯೆ ತರನನವೆಂದು ಬಗೆವರ
ಮರುಳಿಗೇನೆನಲಿಂದು !

## ಹೂವಡಿಗಿತ್ತಿ

ನಾದನಾಮಕ್ರಿಯಾ

ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ!

೧

ಸಂಪಗೆಯ ಮಲ್ಲಿಗೆಯ
ಸೊಂಪು ಸೇವಂತಿಗೆಯ
ಕಂಪೊಗೆವ ಜಾಜಿಯನು ಕೊಳ್ಳಿರಮ್ಮಾ!
ಕೆಂಪು-ಬಿಳಿ ತಾವರೆಯ
ಸುರಯಿ ಸುರಹೊನ್ನೆಗಳ
ಪೆಂಪುವಡೆದರಳುಗಳ ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ!

೨

ಒಮ್ಮೆಯೇ ಮೂಸಿದರು
ಜುಮ್ಮುಜುಮ್ಮೆನುಪುದೆದೆ,
ಕಮ್ಮನೆಯ ಹೂಗಳಿವು ಕೊಳ್ಳಿರಮ್ಮಾ!
ನಮ್ಮ ತೋಟಿಗರಣ್ಣ
ಹೆಮ್ಮೆಯಲಿ ಬೆಳೆಯಿಸಿದ
ಸೊಮ್ಮು ಈ ಅರಳುಗಳು, ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ!

೩

ಬರಿಯೆ ಹೊರಬಣ್ಣದಲಿ
ಮಿರುಗಿ ಕಣ್ಣನು ಸೆಳೆವ
ಬರಡುಗಂಪಿನವಲ್ಲ, ಕೊಳ್ಳಿರಮ್ಮಾ!
ಹುರುಳನೆಲ್ಲೆಡೆಯಲಿಯು
ಹರಡಿ ಮಂದಿಯ ಮನವ
ಬೆರಗುಗೊಳಿಸುವ ಅರಳು, ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ॰ ಹೂವ ಕೊಳ್ಳಿರಮ್ಮಾ!

೪

ಬೆಳಗುಜಾವದಿ ಮೂಡಿ-
ದೆಳನೇಸರನು ನೋಡಿ
ನಲಿದು ಬಾಯ್ದೆರೆದರಳ ಕೊಳ್ಳಿರಮ್ಮಾ!
ಎಳೆಯ ನೇಸರು ಹೊನ್ನ
ಸೆಳೆಗದಿರ ಸೋಂಕಿಸಲು
ತಳೆದಿಹವು ಹೊಸಚೆಲುವ, ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ॰ ಹೂವ ಕೊಳ್ಳಿರಮ್ಮಾ!

೫

ಅಳಿಯ ಬಳಗದ ಕಣ್ಣು-
ಗಳನು ತಪ್ಪಿಸಿ ತಂದೆ
ಗಳಿಲನೇ ನೀವೀಗ ಕೊಳ್ಳಿರಮ್ಮಾ!
ಅಳಿಯ ಬಳಗದ ಬಾಯ್ಗೆ
ಸಿಲುಕಿದರೆ ಈ ಅರಳಿ-
ನೆಳ ಎಸಳು ಸಹ ಸಿಗದು, ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ॰ ಹೂವ ಕೊಳ್ಳಿರಮ್ಮಾ!

೭

ದೂರದೂರದಿ ನೋಡೆ
ತೋರದಿವುಗಳ ಸೊಬಗು
ಸೇರಿಸಲು ಮುಡಿಗಿವನು ಕೊಳ್ಳಿರಮ್ಮಾ!
ಸೇರಿಸಲು ಮುಡಿಗಿವನು
ಮುನಿದಿರೆಯು ನಿಮ್ಮವನು
ಸಾರಿಬರುವನು ಬಳಿಗೆ, ಕೊಳ್ಳಿರಮ್ಮಾ !
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ!

೭

ಸುರಲೋಕದರಳುಗಳು
ಸರಿಯೆನಿಸವಿವುಗಳಿಗೆ,
ಗರತಿಯರು ನೆರೆದೀಗ ಕೊಳ್ಳಿರಮ್ಮಾ!
ಗರತಿಯರೆ ನೀವು ಮುಡಿ-
ಗಿರಿಸಿದರೆ ಈ ಅರಳ
ಸುರರನ್ನು ಮೀರುವಿರಿ ! ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ!

೮

ಮಡದಿಯರು ಮುಡಿಮುಡಿದು
ಬೆಡಗ ಬಳೆಯಿಸಿರೆಂದು
ಪಡುವೆನಾ ತವಕವನು, ಕೊಳ್ಳಿರಮ್ಮಾ!
ಮುಡಿಯದಿರೆ ಈ ಹೂವು
ಕೆಡುತೆ ಸುಮ್ಮಗೆ ಬಾಡಿ
ಹುಡಿಗೂಡಿ ಹೋಗುವುವು ; ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ!

೯

ಬೆಡಗಿನರಳಿವು ಬರಿದೆ
ಹುಡಿಗೂಡಿದರೆ ನಾನು
ತಡೆಯೆನೆದೆಮಿಡುಕನ್ನು, ಕೊಳ್ಳಿರಮ್ಮಾ!
ಒಡೆಯ ತೋಟಿಗರಣ್ಣ
ಒಲವಿನಲಿ ಕೊಟ್ಟರಳ
ಕೆಡಿಸುವುದು ಸರಿಯಹುದೆ? ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ಼ ಹೂವ ಕೊಳ್ಳಿರಮ್ಮಾ!

೧೦

ಹುಡಿಯ ಕೂಡಿಸಿ ಹೂವ
ಕೆಡಿಸುವುದಕಿಂತಲೂ
ಕೊಡುವೆ ಹಾಗೆಯೆ ಮುಡಿದುಕೊಳ್ಳಿರಮ್ಮಾ!
ಮುಡಿಯೆ ಅರಳನು ನಿಮ್ಮ
ಬೆಡಗನ್ನು ನೋಡುತಲಿ
ಪಡೆವೆ ನಾ ನಲಿವನ್ನು, ಕೊಳ್ಳಿರಮ್ಮಾ!
ಕೊಳ್ಳಿರಮ್ಮಾ಼ ಹೂವ ಕೊಳ್ಳಿರಮ್ಮಾ!

೧೧

ಸಂಪಗೆಯ ಮಲ್ಲಿಗೆಯ
ಸೊಂಪು ಸೇವಂತಿಗೆಯ
ಕಂಪೂಗೆವ ಜಾಜಿಯನು ಕೊಳ್ಳಿರಮ್ಮಾ!
ಕೆಂಪು-ಬಿಳಿ ತಾವರೆಯ
ಸುರಯಿ ಸುರಹೊನ್ನೆಗಳ
ಪೆಂಪುವಡೆದರಳುಗಳ ಮುಡಿಯಿರಮ್ಮಾ!
ಮುಡಿಯಿರಮ್ಮಾ಼ ಬೆಡಗ ಪಡೆಯಿರಮ್ಮಾ!

## ಮುನ್ನುಡಿ

ರಾಮುನನ್ನರಿತವರು ಶಬರಿಯುನು ಅರಿತಿಹರು,
ಮಾತು ಶಬರಿಯುದಲ್ಲ, ಬಗೆವೊನಲಿದಾಕೆಯುದು.

# ಶಬರಿಯ ಬಾಳು

## ೧. ಬೇಡ ಬಳಿಯೊಳು ಕುಳಿತು :

“ ಒಬ್ಬಳೇ ಒಬ್ಬಳೇ ಕಗ್ಗಾಡಿನೊಳಗಿರುವೆ,
ನನ್ನ ಹುಟ್ಟನು ತಿಳಿಯೆ, ಬಳೆದ ಬಗೆಯನ್ನರಿಯೆ,
ನಾನಾರು . . ? ಬಂದೆನೆಲ್ಲಿಂದಿಲ್ಲಿ . . ? ಏತಕ್ಕೆ . . ?
ಹಕ್ಕಿ–ಮಿಗಗಳನೆಲ್ಲ ತಾಯಿಗಳು ಪಡೆಯುವುವು,
ನನ್ನ ಪಡೆದವರಾರು . . ? ಎಲ್ಲವಾ ತಾಯಿಗಳು
ತಮ್ಮತಮ್ಮೆಳೆಯ ಹಿಳ್ಳೆಗಳನ್ನು ಮರಿಗಳನು
ಒಲವಿನಲಿ ಮುತ್ತಿಟ್ಟು, ಮೈಮೂಸಿ ಗುಟುಕಿತ್ತು,
ಮೊಲೆಯುಣಿಸಿ ಚಳಿಗಾಳಿಗಳ ತವಿಸಿ ಸಂತವಿಸಿ,
ಬಳೆಯಿಸುವುದನು ನಾನು ದಿನದಿನವು ನೋಡುವೆನು ;
ಎಳೆಯತನದಿಂದೆನ್ನನೊಲಿದು ಸಲಹಿದರಾರು . . ?
ಬಳೆದು ದೊಡ್ಡವಳಾದುದೆಂತು . . ? ತಿಳಿಯದಲಿಹೆನು.
ಹಸಿವಾಗೆ ಹೊಸಹಣ್ಣ ತಿನಲು–ಬಾಯಾರಿರಲು
ಹೊಳೆಯ ತಿಳಿನೀರ ಕುಡಿಯಲು ತಿಳಿಯಿತೆಂತೆನಗೆ . . ?
ಹಕ್ಕಿಗಳ ಹಿಂಡನ್ನು–ಕೋತಿಗಳ ಬಳಗವನು–
ಮಿಗದ ಜಂಗುಳಿಯನ್ನು ನೋಡಿ ನನ್ನದು ನಾನೆ
ಹಣ್ಣುಗಳ ತಿಂದು ನೀರ್ ಕುಡಿಯಲರಿತಿಹೆನೇನೊ . . ! ”

“ ಅಡವಿಮಿಗ . . ಮಂಗ-ಹಕ್ಕಿಗಳು ತಮ್ಮಂತಿರುವ
ಒಡನಾಡಿಗಳ ಬೆರತು ಆಟಗಳನಾಡುವುವು ;
ಊಟವನು ಮಾಡುವುವು, ಕುಣಿದು ಕೆಲೆದಾಡುವುವು ;
ನನಗೆ . . ! ನನ್ನಂತಿರುವ ಒಡನಾಡಿಯೇ ಇಲ್ಲ ;
ಆಡುವೆನದಾರೊಡನೆ ? ಊಡುವೆನದಾರೊಡನೆ ?
ಕೂಡಿ ಕೆಲೆವಾಡಿ ಮಾತಾಡುವೆನದಾರೊಡನೆ . . ?
ಹಕ್ಕಿಗಳ ಹಾಡುಗಳನೇ ಕೇಳಿ ಹಿಗ್ಗುವೆನು ;
ಕೋತಿಗಳ ಕುಣಿತದೊಡನೆಯೆ ಕುಣಿದು ತಣಿಯುವೆನು ;
ಮಿಗದ ಜಂಗುಳಿಯೊಡನೆ ನಗುತೆ ನೆಗೆದಾಡುವೆನು ;
ಇವರನೇ ನನ್ನ ಕೆಳೆಯರನಾಗಿ ತಿಳಿದಿಹೆನು.
ಕಾಡಿನೊಳಗಲೆದು ಓಡಾಡಿ ಬಳಲಿಕೆಯೊದವೆ
ಬೀಡಿನಲಿ ಬಂದು ಬಳಲನು ಕಳೆದುಕೊಳಲೆಂದು
ಕುಳಿತಿರುವೆ; ಇಲ್ಲದಿರೆ ಮಲಗಿರುವೆನೊಬ್ಬಳೇ ;
ಬಳಿಯಲ್ಲಿ ಬೇರಾವ ಸುಳಿದಾಟವೇ ಇರದು ;
ಕಡಲಿನೊಳಗಲೆಯೆದ್ದು ಕುಣಿದಾಡುವಂತಾಗ
ಒಡಲಲ್ಲಿ ಎಂತಹದೊ ಕುಣಿದಾಟ ನಡೆವಂತೆ
ಎನಿಸುವುದು ; ಬೆವರುವೆನು ‘ ಇದು ಏನು ’ ಎಂದೆನುತೆ.
ಇರಲಿರಲು ನನ್ನೊಡಲ ಕುಣಿದಾಟದೊಡನೆಯೇ
ಬೆರೆತು ಒಂದಾಗುವೆನು, ಹೊರಗನೇ ಮರೆಯುವೆನು ;
ಬಗೆಬಗೆಯ ನೋಟಗಳ ನನ್ನೆದುರು ನೋಡುವೆನು
ಹಾಗೆಯೇ ನಾನಿರಲು ‘ ನನ್ನನರಸುತ ನನ್ನ
ಒಡನಾಡಿ ಯಾವನೋ ಬರಲಿರುವ ’ ಎಂತೆಂಬ
ಬಗೆಯೊಂದು ಹೊಳೆಯುವುದು ; ಎದೆಯು ಜುಮ್ಮೆನ್ನುವುದು,
ಮೈಯ ನವಿರೇಳುವುದು, ಹಾರಿ ಬಿದ್ದೇಳುವೆನು ;
ತೆರೆದ ಕಣ್ಣುಗಳಿಂದ ಸುತ್ತಲೂ ನೋಡುವೆನು ;
ನೆರೆಯೊಳೇನೂ ಇರದು ; ಬೀಡ ಬಿಟ್ಟೇಳುವೆನು,
ಹೊರಹೊರಟು ಹುಬ್ಬುಗೈಯಲಿ ದೂರ ನೋಡುವೆನು ;

ಸುಳಿವಾರದೂ ಸಿಕ್ಕದಿರಲಾಸೆಗುಂದುವೆನು.
ಕಳವಳದಿ ನಿಡುಸುಯಿದು ಮರಳಿ ಬೀಡನು ಸೇರಿ
ತಿಳಿಯದೇನೊಂದನೂ ಬಿದ್ದುಕೊಳ್ಳುವೆ ನಾನು.
ಏಗಲೂ ನನಗೆ ಹೀಗಾಗುತಿರುವುದದೇಕೊ . . !
ಹೀಗೆಯೇ ಎನಿತು ದಿನ ಬದುಕ ನೂಕಲು ಬೇಕೊ . . !

ನನ್ನವರು ಇನ್ನಾರು ಇಲ್ಲ ! ನಾನಿದ ಬಲ್ಲೆ :
ಇನ್ನೊಂದನೇನ ಬಯಸವೆ ನನ್ನ ಕಾಡಿನಾ
ಒಡನಾಡಿಗಳ ಬೆರೆತು ನಲಿಯುತಿರಬೇಕೆನುವೆ ;
ಹಿಗ್ಗಿನಲ್ಲಿಯೆ ಬದುಕ ಹಾರಿಬಿಡಬೇಕೆನುವೆ ;
ಆದರೇನಿದು ಆಶೆ ! ಮಿಂಚಿನಂದದಿ ಮೂಡಿ
ಆಗಾಗ ಕೆಟ್ಟ ಕನಸುಗಳನ್ನು ಕಾಣಿಸುತೆ
ಇಲ್ಲದುದನಾವುದನೊ ಇದ್ದಂತೆ ತೋರಿಸುತೆ
ಬೆಲ್ಲದಂತಹ ಬಾಳ ಬೇವಾಗಿ ಮಾಡುತಿದೆ.
ಇರಬಹುದೆ ಯಾವನಾದರು ನನ್ನ ಒಡನಾಡಿ . . !
ಅರಸುತಲಿ ಬರಬಹುದೆ ಆತ ನನ್ನೆಡೆಗೆ . . ! ”

### ೨. ದಾರಿಯನು ನಡೆಯುತಿರೆ :

“ ಎನಿತು ಸೊಗಸಿನದು ಇಂದಿನ ದಿನವು ! ಹಗಲು ಬರೆ
ಬಿರುಮುಗುಳು ಅರಳುವೊಲು ಎಡೆಬಿಡದೆ ನನ್ನೆದೆಯು
ಅರಳುತಿದೆ ; ಅಡಿಯಿಂದ ಮುಡಿವರೆಗು ಮೈಯ ನರ-
ವುಬ್ಬುತಿವೆ ; ತುಂಬುದಿಂಗಳು ಮಿರುಗುವಿರುಳಲ್ಲಿ
ತೊರೆಯ ಸಿರಿಯನು ನೋಡೆ–ಸಂಜೆಯಾಗಸ ನೋಡೆ–
ತಳಿತ ಬನವನು ನೋಡೆ–ಅಲರ ಕಾವಣ ನೋಡೆ–
ಎನಿಸುತಿಹ ಬಗೆಯನೆಲ್ಲವ ಬೆರಸಿದರು ಇದಕೆ
ಹೊಂದಿಕೆಯೆನಿಸದಹಹ ! ಇಂದಿನಂತಹ ದಿಸವೆ
ಎಂದೆಂದು ಇದ್ದರದು ಅಂದವೆನಿತಾಗುವುದು . . ! ”

ನಡುವಗಲು, ಬೇಸಗೆಯ ಸುಡುಬಿಸಿಲು, ನಾ ಬೀಡಿ-
ನೆಡೆಯಲಿಯೆ ಕುಳಿತಿದ್ದೆನಿಂದು, ಬಳಿಯನು ಸಾರಿ
ಬಂದರಿಬ್ಬರದಾರೊ ದಾರಿಗರು : ಕೇಳಿದರು :
" ಬಂದಿನಿತು ನೆಳಲಿನಾಸರೆ ದೊರೆವುದೇನಿಲ್ಲಿ ? "
ಬೆರಗುಗೊಂಡೆನು ; ಆಗ ಮರುನುಡಿಯನಾಡಲಿಕೆ
ಬರಲೆ ಇಲ್ಲೆನಗೆ : ಅವರನು ನೋಡಿ ನನ್ನನೇ
ಮರೆತುಬಿಟ್ಟೆನು ನಾನು ; ಎನಿತು ದಿಟ್ಟಿಸಿದರೂ
ಸಾಕೆನವು ಕಣ್ಣುಗಳು ;—ಎನಿತೊ ವೇಳೆಯನಂತೆ
ನೂಕಿದೆನು—ಬಳಿಕ ನಾ ನುಡಿಯಲಿಕೆ ಹವಣಿಸಿದೆ;
ಹೊರಡಲೊಲ್ಲದು ಮಾತು ನನ್ನ ಬಾಯಿಂದೊಂದು.
ಗಕ್ಕನೇ ನಾನೆದ್ದೆ : ಅವರಲ್ಲಿ ನಸುಮುಂದೆ
ನಿಂದವನ ಕೈಹಿಡಿದೆ, ಬೀಡಿನೊಳು ಕರೆದೊಯ್ದೆ,
ಎಳದಳಿರ ಜಗುಲಿಯೊಳು ಕುಳ್ಳಿಸಿದೆ ; ಹಿಂಬದಿಗೆ
ನಿಂದವನು ಬೆಂಬಿಡದೆ ಬಂದ, ಬೀಡನು ಸೇರಿ
ತಳಿರ ಹಾಸಿಗೆಯ ಬಳಿ ನೆಲದಲಿಯೆ ತಾ ಕುಳಿತ:
" ಚೆನ್ನರವರಿಬ್ಬರೂ ಅಣ್ಣತಮ್ಮದಿರಂತೆ !
ಬೀಡ ಮುಂದಣ ಮರದಲಿರುವ ಮುಂಗನಿಗೆ ಮರಿ
ಜೋಡಾಗಿ ಇರುವವಲೆ ! ಮೊದಲು ಹುಟ್ಟಿದುದಣ್ಣ,
ಬಳಿಕಿನದದುವೆ ತಮ್ಮ ; ಅವರಂತೆಯೇ ಇವರು.
ತಳಿರ ಜಗುಲಿಯಲಿ ಕುಳ್ಳಿರಿಸಿದಾತನೆ ಅಣ್ಣ,
ಕೆಳಗೆ ಕುಳಿತವ ತಮ್ಮ : ಚೆಲುವರವರಿಬ್ಬರೂ,
ಅವರಲಿಯು ಅಣ್ಣನನು ನೋಡಿ ನನ್ನೆದೆಯಲ್ಲಿ
ಮಿಂಚು ಹೊಳೆದಂತಾಯ್ತು, ನನ್ನ ದಿಟ್ಟಿಗಳನ್ನು
ಬೆಸೆದುಕೊಂಡನು ಆತನೇ ತನ್ನ ಮೈತುಂಬ ;
ಇನ್ನಾವುದನು ನೋಡಲೊಲ್ಲದಾದವು ಕಣ್ಣು. "
" ಕೆರೆಯ ನೀರಲಿ ನನ್ನ ಮೈನೆಳಲು ಮೂಡಿರುವ
ನಿರುಕಿಸುತ ಬಂದಿರುವೆ ; ಇನಿತು ದಿನ ಈ ಬನದಿ

ನನ್ನಂತೆ ಇರುವವರನಾರನೂ ನೋಡಿಲ್ಲ!
ಇಂದೆನ್ನ ಬೇಡಿಗೈತಂದ ಅಣ್ಣನ ಮೈಯು
ಅಂದವದು ನನಗೆ ಸರಿಯೊಂದಿ ತೋರುತಲಿಹುದು ;
ಕಣ್ಣೆವೆಯು ಕದಲಿಸದೆ ಅಣ್ಣನನು ನೋಡಿದೆನು ;
ನನ್ನಂತೆ ಕೈಕಾಲು, ನನ್ನ ಹಾಗೆಯೆ ಒಡಲು ;
ಆದರೆಯು ನಮ್ಮಿಬ್ಬರೊಳು ನಸುವೆ ಬಿಡುವಿಹುದು.
ಅರಳಿರುವ ಕನ್ನೈದಿಲೆಯ ಕಳೆಯದವನ ಮೊಗ,
ನನ್ನ ಮೊಗವಂತಿಲ್ಲ; ತಾರೆಗಳ ತೊಳಗವನ
ಕಣ್ಣೊಳಗೆ ನೆಲಸಿಹುದು, ನನಗದೇನೂ ಇರದು ;
ನಗೆಯು ಮನೆ-ಮಾವಿನೆಳ ಚಿಗುರಿನೊಲು ಚೆಂದುಟಿಯು—
ಹೊಗರೊಗೆವ ಹಲ್ಲ ಸಾಲುಗಳು-ಮೇಲ್‌ದುಟಿಯಲ್ಲಿ
ಮೊಗದೋರುತಿಹ ಕರಿಯ ನವಿರು—ಆತನಿಗಿಹವು.
ಇಲ್ಲವೆನಗಾವುದೂ : ಬೇಸಗೆಯ ಬೆಳಗಿನಾ
ಬಾನ ಬಣ್ಣದ ಬೆಡಗು ಆತನೊಡಲಿಗೆ ಇಹುದು ;
ಹಾಗಿರುವುದೇನೆನಗೆ . . ! ಎನಿತವನ ಮೈನುಣ್ಪು
ಎನಿತು ಕುರುಳಿನ ಕಪ್ಪು! ಎನಿತು ತೋಳಿನ ಬಿಣ್ಪು!
ಕೈಪಿಡಿದು ಬೇಡಿನೊಳಗುಯ್ವಾಗಿನಾ ಸೋಂಕು
ಎನಿತು ಸೊಗಸಿದ್ದಿತಹ! ಇನ್ನು ಬೇಕೆನ್ನಿಸಿತು.
ಸುಗ್ಗಿಯಲಿ ಹಾಡುತಿಹ ಹಕ್ಕಿಗಳ ಇಂಚರವ
ಕುಗ್ಗಿಸಿಯೆ ಬಿಡುವುದಾತನದೊಂದೆ ಮೆಲುನುಡಿಯು ;
ಹಣ್ಣುಗಳ ಬಯಕೆಯಲಿ ಹೊಟ್ಟೆಹಸಿದಿರುವ ತೆರ
ಅಣ್ಣನಿನಿನುಡಿಗಾಗಿ ನನ್ನ ಕಿವಿ ಹಸಿದಿಹವು ;
ಇನ್ನು ಇನ್ನೂ ಆತನನ್ನು ನೋಡುವೆನೆಂದು
ಕಣ್ಣುಗಳು ಇದ್ದಲಿಯೆ ಇರಲೊಲ್ಲದಾಗಿಹವು.
ಅವನಾರು . . ? ಎಲ್ಲಿಯವ . . ? ಇಲ್ಲಿ ಬಂದಿಹನೇಕೆ . . ?
"ಕಿರಿಯನವ ಹಿರಿಯನನು ಕರೆಯುವನದೇನೆಂದು . . ?
'ಸಿರಿರಾಮ! ಸಿರಿರಾಮ!!' ಮಾತೆನಿತು ಅಂದವಿದು!

ಮೇಯಲೆಂದೈದಿದಾ ತಾಯಿಗಳು ಬಳಿಗೆ ಬರೆ
ಮರಿಗಳವು ಪಿಗ್ಗಿ ನೆಗೆದಾಡುವುದ ನೋಡಿಹೆನು :
ಹಾಗೆಯೇ ನನ್ನ ಬಗೆಯಿಹುದಿಂದು ; ಏತಕಿನು . . ?
ಸರಿ ! ಅಹುದು ! ಆವನೆನ್ನ ತಾಯಿಯೇ ಇರಬಹುದು !
ಅಲ್ಲದಿರೆ ಆಗಾಗ ' ನನ್ನನರಸುತಲೊಬ್ಬ
ಒಡನಾಡಿ ಬರಲಿರುವ ' ಎಂದು ಹೊಳೆಯುವುದಲಾ !
ಆವನೆ ಇವನಿರಬಹುದೆ . . ? ಕನಸು ನನಸಾಗಿಹುದೆ . . ?
ಏನಾದರೂ ಇರಲಿ, ಇದುವರೆಗು ಕಾಣದವ-
ನಿಂದು ನಾ ಕಂಡಿಹೆನು ; ಕೈಗೆ ಮೊರೆದೀಹಣ್ಣು
ಎಂದೆಂದು ಅಗಲದೊಲು ಏನ ಮಾಡಲಿ ನಾನು . .?
" ಬೀಡಿನಲ್ಲವರು ಬಳಲನು ಕಳೆದುಕೊಳುತಿಹರು :
ಅವರ ಹಸಿವನು ತಣಿಸೆ ಸವಿಸವಿಯ ಹಣ್ಗಳನು
ತರಲಿಕೆಂದೀಗಿಲ್ಲಿ ಹೊರಟು ಬಂದಿಹೆ ನಾನು :
ಬಳಿಯೊಳೆಲ್ಲಿಯು ಇಲ್ಲಿ ಚೆಲುವ ಹಣ್ಣುಗಳಿಲ್ಲ,
ಹೊಳೆಯಾಚೆ ಹೆಚ್ಚಿಟ್ಟವಿರುವುದಲೆ ! ಮೇಲೇರೆ
ನಡುಬೆಟ್ಟದಲಿ ಹಣ್ಣು ಗಿಡಗಳೇ ತುಂಬಿಹವು ;
ಕಡಿದು ಬಲು ಬೆಟ್ಟವದು ! ಏರಿ ಹೋಗುವುದಕ್ಕೆ
ದಾರಿಯೇ ಸರಿಯಿಲ್ಲ ! ಮುಳ್ಳು-ಕಲ್ಲುಗಳೇನು,
ಹಳ್ಳ-ತೆವರುಗಳೇನು ! ಕೋತಿಗಳಿಗಾದೊಡೆಯು
ಏರಲಿಕೆ ಬಾರದದು ; ಏನಿದ್ದರೂ ಇರಲಿ !
ಹೊಳೆಯಾಸಿ ನಾನೀಗ ಹೋಗಿ ಬೆಟ್ಟವನೇರಿ
ಚೆಲುಚೆಲುವ ತನಿವಣ್ಣುಗಳ ತಂದೆ ತೀರುವೆನು. "

## ೩. ನಡುಬೆಟ್ಟವನ್ನೇರಿ :

" ಬೆಟ್ಟವನು ಹತ್ತಿಬರಲೆಷ್ಟು ತೊಂದರೆಯಾಯ್ತು . . !
ಎಡವಿ ಮುಗ್ಗರಿಸಿ ನನ್ನಡಿಯ ಬೆರಳೊಡೆದಿಹವು ;

ಕುತ್ತುರೊಳು ನುಸುಳಿ ಬರುತಿರಲು ಮೊನೆಮುಳ್ಳುಗಳು
ಕಿತ್ತುಬಿಟ್ಟಿದೆ ನನ್ನ ಮೈದೊವಲನಲ್ಲಲ್ಲಿ ;
ಒಂದೆಡೆಗೊ . . ದಾರಿ ಬಲು ಕಡಿದಿನದು, ಬಲಗಡೆಗೆ
ಬರಿಯೆ ಮುಳ್ಳಿನ ಮೆಳೆಯ ಕೊಂಪೆಗಳು ; ಎಡಗಡೆಗೆ
ಆಳವಾಗಿಹ ಕೊಳ್ಳ, ಅರಿತರಿತು ಅಡಿಯಿಡುತ
ಬರುತಿದ್ದೆ ; ಒಂದು ಸಲ ಅಡಿಬುಡದ ಕಲ್ಲು ನಸು
ಅಲುಗೆ ತಪ್ಪಿತು ತೂಕ ; ಉರುಳಿ ಬೀಳುತಲಿದ್ದೆ
ಕೊಳ್ಳದಲಿ ; ಅನಿತರೊಳೆ ಕೈಗೊಂದು ಮುಳ್ಳಮೆಳೆ
ದೊರೆಯಲದನೇ ಗಟ್ಟಿಬಿಗಿದು ಕೈಯಲಿ ಹಿಡಿದೆ ;
ಕೊಳ್ಳದಲಿ ಬೀಳುವವಳುಳಿದೆನಾದರು ಕೈಗೆ
ಮುಳ್ಳುಗಳು ಮುರಿದು ನಸು ನೋವದೇನೋ ಆಯ್ತು ;
ಏರಿಬಂದಾಯ್ತಲೀ ಬೆಟ್ಟವನು ! ಸರಿ ! ಈಗ–
ಆರಿಸುವೆ ಬಗೆಬಗೆಯ ತನಿವಣ್ಣುಗಳ ಬೇಗ. ”

“ ಇದೊ ಇದೋ ! ಮಾಮರವು ? ಕಿರುಬೆಟ್ಟದಂತಿಹುದು.
ಅಡಿಯ ನೆಲದಲಿಯೆ ಹಣ್ಣೆಡೆಬಿಡದೆ ಬಿದ್ದಿಹವು ;
ಹುಡಿಗೂಡಿಹವು ಕೆಲವು ! ಕೊಳೆಯಲಾಗಿವೆ ಕೆಲವು !
ಹಕ್ಕಿ ತಿಂದುವು ಕೆಲವು ! ಬಿದ್ದ ಹಣ್ಣವು ಬೇಡ !
ತಲೆಯ ಸೆಳೆಗೊಂಬಿನೊಳು ತನಿವಣ್ಣು ತೂಗುತಿವೆ ;
ಎಳಬಿಸಿಲ ಬಣ್ಣವನು ತಳೆದಂತೆ ತೋರುತಿವೆ.
ತರುವೆನವುಗಳನೀಗ ಸರಸರನೆ ಮರವೇರಿ ! ”

* * * * *

“ ಇಲ್ಲಿಹುದು ಬೋರಿಮರ ! ಹಣ್ಣು ಹೊಳಪದು ಹಚ್ಚಿ
ಬೆಳಗಿನಾ ಮೂಡುವೆಟ್ಟದ ಕೋಡೊ ! ಎನಿಸುತಿದೆ ;
ಕೊಯ್ವೆನಿವುಗಳನೀಗ ; ಅಯ್ಯೊ ಏನಿದು ಮರವು !
ಒಳ್ಳೆ ಹಣ್ಗಳ ಜೊತೆಗೆ ಮುಳ್ಳನೂ ಪಡೆದಿಹುದು ;

ಹಣ್ಣ ಹಿಡಿಯಲು ಹೋಗೆ ಮುಳ್ಳು ಕೈಕೊರೆಯುವುದು.
ಇರಲಿ ! ಕೊರೆಯಲಿ ! ಹಣ್ಣು ದೊರೆತುವೆನಗಿದೆ ಸಾಕು ! ”

* * * * *

“ ಇದೊ ! ಇಲ್ಲಿ ನೇರಿಳೆಯು ! ಅದೊ ಅಲ್ಲಿ ಪೇರಿಳೆಯು
ಹಣ್ಣುಗಳ ಹೊರೆಯಿಂದ ಹೊಂದಿಹವು ನೆಲದೆಡೆಯ ;
ಹೆಚ್ಚೇನು ಬೇಡವಿವು, ತೆಗೆದುಕೊಳ್ಳುವೆ ಕೆಲವು ! ”

* * * * *

“ ಇನ್ನು ಸಾಕಲ್ಲವೇ ! ಹಿರಿದು ಹೊರೆಯಾಗುವುದು ;
ಕಡಿದಾದ ದಾರಿಯಲಿ ನಡೆಯೆ ಜಡವಾಗುವುದು ;
ಸಾಕಿನಿತು ! ಎಲ್ಲವನು ಸಲ್ಲಿಸುವೆನಾತನಿಗೆ ;
ಇನ್ನೊಂದು ಮಾತಿಹುದು ; ಹಣ್ಗಳಿವನೆಲ್ಲವನು
ಹೀಗೆಯೇ ಒಪ್ಪಿಸಲು ಚೆನ್ನಹುದೆ . . ! ಇವುಗಳಲಿ
ಕೆಲವು ಹುಳಿಯಿರಬಹುದು, ಕೆಲವು ಹುಳುಕಿರಬಹುದು,
ಕೆಡುಕು ಕೆಲವಿರಬಹುದು, ಇದಕೇನ ಮಾಡುವುದು . . !
ಬೇರೆ ಮತ್ತಿದೆಯೇನು ! ಎಲ್ಲ ಹಣ್ಣುಗಳನೂ
ಹಲ್ಲಿಂದ ನಸುನಸುವೆ ಕಚ್ಚಿ ಸವಿನೋಡುವೆನು !
ಒಳಿತಾದುವಿರಲವಗೆ, ಹುಳಿಕೆಡುಕು ಇರಲೆನಗೆ. ”

* * * * *

“ ಅಹಹ ! ಮಾವುಗಳೆಲ್ಲ ಜೇನ ಸೊನೆಯಂತಿಹವು,
ಬೋರೆಹಣ್ಣಿನ ಸವಿಯು ಬಾಯ ತಣಿಸದೆ ಬಿಡದು,
ಎಲ್ಲವೂ ಒಳ್ಳೆಯವೆ, ಜೊಳ್ಳು ಒಂದೂ ಇಲ್ಲ !
ಸಲ್ಲಿಸುವೆನೆಲ್ಲವನ್ನವಗೆ ; ಉಳಿಯವು ನನಗೆ . . !
ಉಳಿಯದಿರಲವಕೇನು ! ಇಂದಿನೊಂದೇ ದಿನವು
ಒಡಲ ಹಸಿವಿನ ನೋವ ತಡೆದುಕೊಳಲಾರೆನೇ ?
ಹೊರಡುವೆನು ನಾನಿನ್ನು, ಹಗಲು ಮುಗಿಯಲಿಕಾಯ್ತು. ”

### ೪. ಹೊಳೆಯಂಚಿನೊಳು ಕುಳಿತು :

“ ಹೊರಟು ಹೋದನು ಆತ; ಇರು ಇಲ್ಲಿಯೇ ಎನುತ
ಎನಿತೊ ಹಂಬಲಿಸಿದೆನು ; ಎಣಿಕೆಗೇ ತರಲಿಲ್ಲ
ನನ್ನ ಹಂಬಲಿಕೆಯನು ; ಹೊರಡಲಿಕೆ ಅನುಗೊಂಡ ;
‘ ಇಂದೊಂದೆ ದಿನವಾದೊಡೆಯು ಇರಲು ಬಾರದೇ ? ’
ಎಂದು ನಾ ನುಡಿದ ಮರುಕದ ಮಾತಿಗವನೆಂದ :
‘ ಬಂದೆಬರುವೆನು ಮತ್ತೆ ನಿನ್ನೆಡೆಗೆ, ಸೊಗದಲಿರು ! ’
ಎಂದುದಕೆ ಮರುಮಾತ ನುಡಿಯಲಾರದೆ ನಿಂತೆ,
ಬಂದವರು ಬಂದಪೊಲೆ ಹೊರಟು ನಡೆದರು ಹಾಗೆ.

“ ಹೊರಟಿರಲು ಹಿರಿಯಣ್ಣ ಸಿರುಕಿಸಿದನಲೆ ನನ್ನ !
ಎನಿತಂದವದು ನೋಟ ! ಎದೆಯನಲುಗಾಡಿಸಿತು ;
ನಿನ್ನೆಯಾ ದಿನವೆನಗೆ ಮಿಂಚಿನಂದದಿ ಮೂಡಿ
ಮರೆಯಾದ ತೆರದಿ ತೋರುತಿದೆ ; ಆತನ ಬರುವು
ಕನಸಿನಲಿ ಕಂಡಿರುವ ಕಣಸೇನೊ ! ಎನೆಸುತಿದೆ ;
ಅನಿತು ಬೇಗನೆ ಮುಗಿಯಿತೇಕೆ ನಿನ್ನೆಯ ಹಗಲು . . ! ”

“ ಮರಳಿ ಬರುವೆನು ಎಂದು ಅರುಹಿ ಹೋಗಿರುವನವ,
ಬರುವನೋ ಬಾರದಿರುವನೋ ! ಅರಿವುದೆಂತೀಗ . . !
ಇದ್ದುಬಿಟ್ಟಿದ್ದರೊಳ್ಳೆಯದಿದ್ದಿತವನಿಲ್ಲಿ . . !
ದಿನದಿನವು ಹೋಗಿ ನಾ ತನಿವಣ್ಣ ತರುತಿದ್ದೆ ;
ತಾಯಿ ತನ್ನಯ ಮರಿಗೆ ತಿನಿಸಿ ತಣಿಯುವ ತೆರದಿ
ನಾನೆಯವನಿಗೆ ಹಣ್ಣು ತಿನಿಸಿ ಹಿಗ್ಗುತಲಿದ್ದೆ ;
ಇಬ್ಬರೂ ಜೊತೆಗೂಡಿ ಹೊಳೆಯ ತಡಿಯೊಳಗಾಡಿ,
ತಿಳಿನೀರೊಳೀಸಾಡಿ, ತಳಿರ ನೆಳಲಲಿ ಕುಳಿತು,
ಬೆಳುದಿಂಗಳೊಳು ಕುಣಿದು, ತಳೆಯುತಿದ್ದೆವು ಸೊಗವ ;
ಉಳಿದಿವೆಲ್ಲವನು ತೆರಳಿದನದೇತಕೊ ! ತಿಳಿಯೆ. ”

“ ಈ ಬನವು ಈ ಬೆಟ್ಟ–ಈ ಹೊಳೆಯು ತಿಳಿಪೊನಲು–
ಎಂದಿನವೆ ಇರುವುವಲೆ ! ಅಂದು ನೋಡಿದ ಚೆಲುವು
ಇಂದಿಲ್ಲ, ಏತಕಿದು . . ! ಬಂದಿದ್ದ ಚೆಲುವನವ
ಅಂದಿನಾ ಅಂದಚೆಂದವನೆಲ್ಲ ತನ್ನೊಡನೆ
ಎತ್ತಿಕೊಂಡೊಯ್ದಿಹನೊ . . ! ತಿಳಿಯೆನೀ ಹೊಲಬನ್ನು ;
ಬೇಸರೊದವಿರಲು ನಾನೀಯೆಡೆಯೊಳೈತಂದು,
ಹೊಳೆಯ ತಿಳಿನೀರಿನಲಿ ಕಾಲಿಟ್ಟು ಕುಳಿತಿದ್ದು,
ಬಳಿಯ ನೀರ್ವಕ್ಕಿಗಳ ಬೆಡಗಿನಲಿ ಕಣ್ಣಿಟ್ಟು,
ತಡಿಯ ತೋಪಿನ ಹಕ್ಕಿ ಕಲಕಲಿಸೆ ಕಿವಿಗೊಟ್ಟು,
ಹೊಡೆದುಹಾಕುತಲಿದ್ದೆ ಬಲುಬೇಸರೆಲ್ಲವನು ;
ಇಲ್ಲಿಯೂ ಸೊಗಸೆನಿಸದಿಹುದಿಂದು . . ! ಏನು ಇದು !

“ ಹಸಿವು ಬಾಯಾರಿಕೆಯ ಹೆಸರನೇ ಮರೆತಿರುವೆ ;
ದಿನದಿನವು ತಿನುವ ಇನಿವಣ್ಣ ಬಯಸದು ಬಗೆಯು ;
ಹಸಿವಿನಾ ನೋವಿನಿಂದೆನಿತೊ ಹಿರಿದಾಗಿರುವ
ನೋವದಾವುದೊ ಕರುಳ ತುಳಿತುಳಿದು ಮೆಟ್ಟುತಿದೆ ;
ಬಿಸಿಲ ಬೇಗೆಯೊಲೇನೊ ಬಸಿರಿನಲಿ ಬೇಯುತಿದೆ ;
ಆತನಲ್ಲದಲೆ ಇನ್ನೇತರದು ನೆನಹಿರದು ;
ಬರುವುದೆಂದೋ ಮರಳಿಯವನು . . ಮಾಡುವುದೇನು . . !

ಸರಿ ! ಅರಿತೆ ಅಹುದಹುದು ! ಇನಿತು ಮಾಡುವೆನಿನ್ನು ;
ಕಣ್ಣೆದುರು ಕಟ್ಟಿಹುದು ಆವನ ಚೆಲುವಿನ ರೂಪು ;
ಅದು ಕದಲಿ ಅಳಿಸದೊಲು ಕಣ್ಣೆರಡನೂ ಮುಗಿದು
ನಿಲಿಸಿಕೊಳುವೆನು ಹಾಗೆ ಅವನ ಸವಿನುಡಿಯಿಂಪು
ಕಿವಿಗಳಲಿ ತುಂಬಿಹುದು ; ಹೊರಗೆಯದು ಹೋಗದೊಲು
ಕಿವಿಗಳನು ಮುಚ್ಚಿ ಎಡೆಬಿಡದೆ ಕೇಳುವೆನಿನ್ನು ;
ಕಿರಿಯನವ ಹಿರಿಯನನು ಕರೆಯುತಿಹ ತೆರದಿಂದೆ

‘ ಸಿರಿರಾಮ ! ಸಿರಿರಾಮ ! ’ ಎಂದು ಕರೆಯುತಲಿರುವೆ !
ನಿನ್ನೆ ಕಂಡುಂಡ ಹಿಗ್ಗಿನ ಬಗೆಯನೇಗಲೂ
ತಂದುಕೊಳಲೆಂದು ಹವಣಿಸುತ ಬದುಕನು ಕಳೆವೆ.
ಬಂದೆ ಬಹೆನೆಂದಿಹನು, ಎಂದು ಬರುವನೊ ಬರಲಿ ! ”

## ಕೋರಿಕೆ

ಕಾನಡಾ

೧

ಒಡೆಯ ನಿನ್ನಡಿಯೆಡೆಯ ಹುಡುಕುತಲಿ ನಡೆದಿಹೆನು,
ಅಡಿಗಡಿಗೆ ದಾರಿಯೊಳು ತಡೆವಡೆಯುತಿಹೆ ನಾನು,
ಹಲವು ಮುನಿಗಳು ನುಡಿದ ಹಲವು ಮಾತುಗಳಿಂದೆ
ಅಲುಗಾಡಿ ಮನವು ಉಯ್ಯಲೆಯಾಡುವಂತಿಹೆನು.

೨

ನಿನ್ನೆಡೆಗೆ ಬರುವುದಿದೆ ನನ್ನ ಕೋರಿಕೆ ದೊರೆಯೆ,
ನಿನ್ನ ದನಿ ಕೇಳುತಿಹ ಕಡೆಗೆ ಬರಬೇಕೆನುವೆ ;
ನನ್ನ ಕಿವಿ ಬಳಿಯೆ ಜನ ಕಲೆತು ಬಲುಬಲು ವಾದ-
ವನ್ನು ಬಳೆಯಿಸಿ ಮರೆಯಿಸುವರು ನಿನ್ನಯ ನಾದ.

೩

ಹಂಬಲಿಸಿ ನಿನ್ನ ಕರೆದಾಗೆಲ್ಲ ಬಳಸಿ ಜನ
ಇಂಬು ಬಿಡದೆಯೆ ನಡುವೆ ತುಂಬಿ ನಿಲುವರು ಚೆನ್ನ !
ನಿನ್ನಡಿಯ ಹುಡಿಗಾಗಿ ಬಾಯಬಿಡುತಿಹ ನಾನು
ಮಣ್ಣ ಹುಡಿಯನೆ ಹೊಂದಿ ಮನವಾಳೆಗುಂದುವೆನು.

೪

ಬಗೆಯೊಳಗೆ ನೂರಾರು ಅಲೆಯೆದ್ದು ಕಲಕಲಿ
ಬಗೆಬಗೆಯ ಕಡೆಗಳಲಿ ತೆರಳಿ ತಿರುಗುತಲಿಹವು ;
ಬಗೆಗಾಣೆನಿವನೆಲ್ಲ ಬಿಗಿದು ಕೂಡಿಸಿ ತಂದು
ಜಗದೊಡೆಯ ನಿನ್ನಡಿಗದೆಂತು ನಾ ಸಲಿಸುವುದು ?

೫

ನಿನ್ನ ಬಳಿಯಲಿ ಬೇಡಿಕೊಳುವೆನೊಂದೇ ಒಂದು
ನಿನ್ನೊಲುಮೆಗಣ್ಣಿಯಲಿ ಬಂಧಿಸೆನ್ನನು ಬಿಗಿದು !
ಚೆನ್ನಾದ ದಾರಿಯೊಂದನ್ನು ತೋರಿಸಿ ನನ್ನ
ನಿನ್ನಡಿಗಳೆಡೆಯಲ್ಲಿ ಕರೆದುಕೊಳುವುದು ಚೆನ್ನ !

ಶಾಂತಿಃ ಶಾಂತಿಃ ಶಾಂತಿಃ

